# ಕಳೆದುಕೊಂಡವಳು
# ಮತ್ತು
# ಇತರ ಕತೆಗಳು

ಬಿ.ಟಿ. ಜಾಹ್ನವಿ



'ಪತ್ರಿಕೆ' ಪ್ರಕಾಶನ
ನಂ.9, ಇ.ಎ.ಟಿ. ರಸ್ತೆ
ಬಸವನಗುಡಿ, ಬೆಂಗಳೂರು-4

**KALEDUKONDAVALU MATTU ITARA KATHEGALU**, a collected stories by B.T. Janhavi, Published and Printed by Patrike Prakashana, Basavanagudi, Bangalore- 560 004
Pages: 85 + 10



ಮೊದಲ ಮುದ್ರಣ: 1996

ಮುಖಪುಟ ಚಿತ್ರ ಕೃಪೆ: ಚಿತ್ರಕಲಾ ಪರಿಷತ್
ಮುಖಪುಟ ವಿನ್ಯಾಸ: ಎಸ್.ಜಿ. ಸ್ಯಾಮ್ಯುಯೆಲ್

**ಅಕ್ಷರ ಜೋಡಣೆ, ಪುಸ್ತಕ ವಿನ್ಯಾಸ: ಬಸವರಾಜು, ಸತೀಶ್**
**'ಪತ್ರಿಕೆ' ಪ್ರಿಂಟರ್ಸ್, ಬಸವನಗುಡಿ, ಬೆಂಗಳೂರು-4**

**ಮುದ್ರಣ: ಸ್ನೇಹಾ ಪ್ರಿಂಟರ್ಸ್ 22, 2 ನೇ ಮೈನ್,**
**ಅತ್ತಿಗುಪ್ಪೆ ವಿಜಯನಗರ 2 ನೇ ಹಂತ, ಬೆಂಗಳೂರು- 40**

# ಮುನ್ನುಡಿ

ಜಾಹ್ನವಿ ಎಂಬ ಹೆಣ್ಣುಮಗಳ 'ವಿಮುಖ' ಎಂಬ ಕತೆ 1993ರಲ್ಲಿ 'ಪತ್ರಿಕೆ'ಯಲ್ಲಿ ಪ್ರಕಟವಾಯಿತು. ನನ್ನ ಒಬ್ಬಿಬ್ಬರು ಪರಿಚಿತರು, 'ಆ ಕತೆಯ ಬಗ್ಗೆ ಏನೆನ್ನುತ್ತೆ' ಎಂದು ಕೇಳಿದರು. ನಾನು ಅದರ ಮೇಲೆ ಸುಮ್ಮನೆ ಕಣ್ಣಾಡಿಸಿದ್ದೆ, ಓದಿರಲಿಲ್ಲ. ನಾನು ನಿಜಕ್ಕೂ ಓದುವುದು ಎಂದರೆ ಪೆನ್ಸಿಲ್ ಹಿಡಿದುಕೊಂಡು ವಾಕ್ಯ, ಪ್ಯಾರಾಗಳನ್ನೊಳಗೊಂಡು ಓದುತ್ತಾ ಒಟ್ಟಾರೆ ಲಹರಿಗಾಗಿ, ಉದ್ದೇಶಕ್ಕಾಗಿ ಹುಡುಕುವುದು. ಆ ಕತೆಯನ್ನು ಸರಿಯಾಗಿ ಓದಿಯೇ ಇಲ್ಲವಲ್ಲ ಎಂದು ಮತ್ತೊಮ್ಮೆ ನೋಡಿದೆ. ಅದು ತುಂಬ ರಸಿಕ ಕತೆ ಅನ್ನಿಸತೊಡಗಿತು; ಇಬ್ಬರು ಹುಡುಗರು, ಒಬ್ಬಳು ಹುಡುಗಿಯ ಈ ಕತೆಯಲ್ಲಿ ಒಂದು ರೀತಿಯ ಆಟ, ಸವಾಲಿದೆ; ಲೈಂಗಿಕ ಬಿರುಗಾಳಿಗೆ ಸಿಕ್ಕ ಹುಡುಗ ಸದಾ ಗೆಲ್ಲುತ್ತಾನೆ ಎನ್ನಲಾಗುವುದಿಲ್ಲ; ಸೋಲು ನಿಜಕ್ಕೂ ಸೋಲಾಗಿರುವುದಿಲ್ಲ. ರಘು ಎಂಬುವನ ಹುಡುಗಿ ಭರತ್ ಎಂಬುವನ ತೋಳಲ್ಲಿ ವಶವಾದದ್ದು. ಒಬ್ಬಳೇ ಇದ್ದಾಗ ಅವಳನ್ನು ತಡವಿದ ಆತ ಬಲಾತ್ಕರಿಸಿದ್ದು ಆಹ್ವಾನವೆನ್ನಿಸುತ್ತದೆ; ಆಕೆ ಸಮಾಧಾನಪಟ್ಟುಕೊಳ್ಳುತ್ತಾಳೆ, "ಬಲಾತ್ಕಾರದಿಂದ ನಡೆಯುವುದೂ ಅದೇ, ಒಪ್ಪಿಕೊಂಡರೆ ನಡೆಯುವುದೂ ಅದೇ". ಇದರಲ್ಲಿ ಸೇರಿರುವ ಸುಪ್ತವಾದ, ದುರಾಶೆಯ, ಪ್ರಾಣಿ ಸಹಜವಾದ ಕಾಮದ ಪರಾಕಾಷ್ಠೆ, ಅದರಿಂದಲೇ ಬರುವ ವಿಶಿಷ್ಟ ರೀತಿಯ ನಿಷ್ಠೆ- ಇದನ್ನೆಲ್ಲ ಒಂದು ರೀತಿಯ ಆಡುಮಾತಿನಲ್ಲಿ, ಬಹುಪಾಲು ಕತೆಗಾರರು ಬರೆಯುವ ಭಾಷೆಗಿಂತ ನಿತ್ಯದ ಮಾತಿಗೆ ಹತ್ತಿರದಲ್ಲಿ ಬರೆದದ್ದು ಕುತೂಹಲ ಕೆರಳಿಸಿತು. ನಾನು ಆಗತಾನೆ ಓದಿದ್ದ ಚಿಲಿ ದೇಶದ ಸ್ಪ್ಯಾನಿಷ್ ಲೇಖಕಿ ಇಸಬೆಲ್ಲಾ ಅಯಂಡೇಯ 'ದಿ ಜಡ್ಜಸ್ ವೈಫ್' ಕತೆಯ ಗುಂಗಿನಲ್ಲಿ ಇದ್ದುದರಿಂದ ಜಾಹ್ನವಿಯ 'ವಿಮುಖ' ಇನ್ನೂ ಚೆನ್ನಾಗಿ ಕಾಣಿಸಿರಬಹುದು. 'ಜಡ್ಜಸ್ ವೈಫ್'ನಲ್ಲಿ ನ್ಯಾಯಾಧೀಶನ ಹೆಂಡತಿ ತನ್ನ ಗಂಡನ ಸುಸಂಸ್ಕೃತ ಪ್ರೇಮದಿಂದ ಬೇಸರಗೊಂಡಿದ್ದರೂ ಸುಪ್ರಸಿದ್ಧ ದರೋಡೆ

ಕೋರ ನಿಕೋಲಾಸ್ ವಿಡಾಲ್‌ಗೆ ಭಯಗೊಂಡಿರುತ್ತಾಳೆ. ಹುಟ್ಟುತ್ತಲೆ 'ಹೆಣ್ಣಿನಿಂದ ತಲೆ ಕಳೆದುಕೊಳ್ಳುತ್ತೀ' ಎಂಬ ಭವಿಷ್ಯದ ಕಟ್ಟಿನಲ್ಲೇ ಬದುಕಿದ ವಿಡಾಲ್ ನ್ಯಾಯಾಧೀಶನ ಶಿಕ್ಷೆಗೆ ಒಳಗಾಗಿ ತಪ್ಪಿಸಿಕೊಂಡು ನ್ಯಾಯಾಧೀಶನ ಹೆಂಡತಿ ಕ್ಯಾಸಿಡಾಳನ್ನು ಒಬ್ಬಳೇ ಇದ್ದಾಗ ಹಿಡಿದು ಕೊಲ್ಲಬೇಕೆಂದಿದ್ದಾಗ ಆಕೆ ಅವನನ್ನು, ಆತ ಆಕೆಯನ್ನು ಲೈಂಗಿಕ ಕ್ರಿಯೆಯಲ್ಲಿ ಬಂಧಿಸುತ್ತಾರೆ; ಆಕೆಯಲ್ಲಿನ ಭಯ, ಆಶೆ, ನೋವು ಒಂದಾಗಿ ಪ್ರೇಮಿಸುತ್ತಾರೆ. ಆತ ಆ ಕೊನೆಯ ಪ್ರೇಮದ ನಂತರ ಸೈನಿಕರಿಂದ ಕೊಲ್ಲಲ್ಪಡುತ್ತಾನೆ.

ನಾನು 'ವಿಮುಖ' ಕತೆಯನ್ನು ಮಹಾನ್ ಕತೆಯೆಂದು ಕರೆಯುತ್ತಿಲ್ಲ; ನಮ್ಮ ಕಥನಕಲೆಯಲ್ಲಿ ಪ್ರೇಮ, ಕಾಮ ಎಂಬುವು ಅಫಿಶಿಯಲ್ ಜಾಡಿನಲ್ಲೇ ಸಂಚರಿಸುತ್ತಿರುವಾಗ ಈ ಹುಡುಗಿ ಜಾಹ್ನವಿ ಹೊಸ ಸಾಧ್ಯತೆಗಾಗಿ ಹುಡುಕುತ್ತಿರುವಂತೆ ಕಾಣಿಸುತ್ತದೆ. ಕತೆ ಓದಿದ ಮೇಲೆ ಜಾಹ್ನವಿಗೆ ಹಾಗೆಂದು ಕಾಗದ ಬರೆದು ಇನ್ನಷ್ಟು ಕತೆ ಬರೆಯಲು ಹೇಳಿದೆ. ಅದರಿಂದ ಸಹಜವಾಗಿಯೇ ಖುಷಿಗೊಂಡ ಜಾಹ್ನವಿ ನನಗೆ ಕಾಗದ ಬರೆದು, "ನೀವು ನಿಮ್ಮ ಪರಿಚಿತರ ಕತೆ ಮಾತ್ರ ಹಾಕುತ್ತೀರಿ ಎಂದು ಇಲ್ಲಿ ನನ್ನ ಗೆಳತಿಯರು ಹೆದರಿಸಿದ್ದರು" ಇತ್ಯಾದಿ ಹೇಳಿದಳು. ಅದೆಲ್ಲ ಸುಳ್ಳು ಎಂಬುದು ಜಾಹ್ನವಿಗೆ ಗೊತ್ತಾಯಿತು. ನಾನು ಆಕೆಗೆ 'ಸಮಕಾಲೀನ ಲ್ಯಾಟಿನ್ ಅಮೆರಿಕನ್ ಸಣ್ಣ ಕತೆಗಳು' ಪುಸ್ತಕ ಕಳಿಸಿದೆ. ಅವಳು ಕತೆಗಾರ್ತಿ ಎಂಬ ವಿಶ್ವಾಸ ಹುಟ್ಟಿಸುವಲ್ಲಿ ಯಶಸ್ವಿಯಾದೆನೆಂದು ಕಾಣುತ್ತದೆ. ಅವಳ ಈ ಸಂಕಲನವೇ ಇದಕ್ಕೆ ನಿದರ್ಶನ.

ಜಾಹ್ನವಿಯ ಈ ಸಂಕಲನದಲ್ಲಿ ಕೆಲವನ್ನು ಮಾತ್ರ ನಾನು ವಿವರವಾಗಿ, ನನ್ನ ವಾಚನಕ್ರಮದ ಪ್ರಕಾರ ಓದಿದ್ದೇನೆ. ಈ ನನ್ನ ಅನ್ನಿಸಿಕೆಗಳನ್ನು ಆ ಓದಿನಿಂದ ನೀಡುತ್ತಿದ್ದೇನೆ. 'ವಿಮುಖ' ಕತೆಯಂತೆಯೇ ಮಧ್ಯಮವರ್ಗದ ಬದುಕನ್ನೊಳಗೊಂಡ ಹಲವು ಕತೆಗಳು ಇಲ್ಲಿವೆ- ಒಬ್ಬ ವ್ಯಕ್ತಿಯ ಮಾನಸಿಕ ಚಿತ್ರ ಕೊಡುತ್ತಾ ಮನಃಶ್ಯಾಸ್ತ್ರದ ಜಡ ನಿರೂಪಣೆಯಾಗಬಲ್ಲ 'ಒಳಗುದಿ' ಎಂಬ ಕತೆ ಅದರ ಡೋಲಾಯಮಾನ ಸ್ಥಿತಿಯಿಂದಲೇ ಆ ಅಪಾಯದಿಂದ ತಪ್ಪಿಸಿಕೊಳ್ಳುತ್ತದೆ. ವೃತ್ತಾಂತ ಕಲೆಯ ಗೆರೆ ದಾಟದೆ ಜೀವ ಉಳಿಸಿಕೊಳ್ಳುತ್ತದೆ. ಹಾಗೆಯೇ ಇಲ್ಲಿಯ 'ವ್ಯಭಿಚಾರ'. ವಾಸ್ತವತೆಗೆ ಗಂಟುಬಿದ್ದು ನಮ್ಮ ಮಧ್ಯಮವರ್ಗದ ಜನಪ್ರಿಯ ಲೇಖಕಿಯರು ಒಪ್ಪುವ ನಿಮಯಗಳನ್ನು ಬಳಸಿ ನೋಡಿದರೆ ಇಲ್ಲಿಯ ಸುಜೀಯ ನಡವಳಿಕೆ ಪ್ರಶ್ನಾರ್ಹ; ಲೀಲಾವತಿಯ ಜೊತೆಗೆ ಇದ್ದಳೆನ್ನುವ ಈ ಹುಡುಗಿ ಇದ್ದಕ್ಕಿದ್ದಂತೆ ದೂರವಾಗಿ ಹತ್ತಿರವಾಗುವುದು, ಲೀಲಾವತಿಯ ಬಗ್ಗೆ ಅವಳು ಮತ್ತು ಅವಳ ತಂಗಿಯ ಕುತೂಹಲ, ಲೀಲಾವತಿಯ ಪ್ರೇಮಪ್ರಕರಣ, ಇದೆಲ್ಲದೂ ಸುಳ್ಳು ಎಂದು ಕತೆಗಾರ್ತಿ ಹೇಳಬಹುದು ಎನ್ನುವಷ್ಟರಲ್ಲಿ ಇದೇ ರೀತಿಯ ಪ್ರೇಮಪ್ರಕರಣದಲ್ಲಿ ಸವಿತಾ ತೊಡಗಿರುವುದು- ಇಲ್ಲಿಯ ಕತೆ. ವ್ಯಭಿಚಾರ ಮತ್ತು ಪ್ರೇಮದ ಗೆರೆ ಮಸುಕಾಗುತ್ತದೆ; ಅದು ಇಲ್ಲಿಯ ವಿಶೇಷ.

ಈ ಮಧ್ಯಮವರ್ಗದ ಘಟನೆಗಳಿಂದ ಭಿನ್ನವಾದದ್ದು 'ಕಳ್ಳುಬಳ್ಳಿ' ಕತೆ. ಇದು ದಲಿತ ಹುಡುಗನೊಬ್ಬನನ್ನು ಕುರಿತದ್ದು. ತನ್ನ ಪುಟ್ಟ ಮಗ ತಿಪ್ಪ ಜೀತದ ಹಿಡಿತದಿಂದ ಪಾರಾದದ್ದು ಬಸ್ವಿಗೆ ಆನಂದ; ಆದರೆ ತಿಪ್ಪ ಅಷ್ಟೇ ಕ್ರೂರವಾದ ಸ್ವಜಾತಿಯ ಮನೆಯಲ್ಲಿ ಜೀತದಾಳಾದದ್ದು ಅವನ ಅಪ್ಪ ಕೆಂಚನಿಗೆ ನೋವು. ಸಾಲ ತೀರಿಸಲು ತಿಪ್ಪನನ್ನು ಆಳಾಗಿ ಇಟ್ಟಿದ್ದ ಕೆಂಚ ತನ್ನ ಜಾತಿಯವನ ಮನೆಯಲ್ಲಿ ಅವನನ್ನ ಅದಕ್ಕಿಂತ ಕೆಟ್ಟದಾಗಿ ನಡೆಸಿಕೊಳ್ಳುವುದನ್ನು ನೋಡಿ ಮನೆಗೆ ಕರೆದುಕೊಂಡು ಬರುತ್ತಾನೆ. ಬಸ್ವಿಗೆ ನಿರೀಕ್ಷಿತವಾಗಿಯೇ ನೆಮ್ಮದಿ ಎನ್ನಿಸುತ್ತದೆ.

ಈ 'ಕಳ್ಳುಬಳ್ಳಿ' ಕತೆ ಮನಕರಗಿಸುವಂತೆ ಇದೆ; ಹಿಂಸೆ ಮತ್ತು ಅವಮಾನ ಎಲ್ಲಿ ಆದರೂ ಹಿಂಸೆ ಮತ್ತು ಅವಮಾನವೇ- ಎಂಬುದು ಇಂಗಿತ.

ಈ ಕತೆ ಮತ್ತು ಮಧ್ಯಮವರ್ಗದ ಜಾಹ್ನವಿಯ ಕತೆಗಳನ್ನು ಕುರಿತು ಹೇಳಬೇಕಾದ ಎರಡು ಮಾತಿವೆ. ಈಕೆಯ ಮಧ್ಯಮವರ್ಗದ ಕತೆಗಳು ಕೊಂಚ ಅಡಿತಪ್ಪಿದರೆ ನಮ್ಮ ಜನಪ್ರಿಯ ಲೇಖಕಿಯರ ಪ್ರೇಮತ್ರಿಕೋನಗಳ, ಸವಕಲು ಮಾತು, ವಸ್ತುಗಳ ಮಾಮೂಲಿ ನಿರೂಪಣೆಗಳಾಗುವ ಅಪಾಯವಿದೆ. 'ಎಲ್ಲವನ್ನೂ ಮರೆಸುವ ಮೋಡಿಯಿತ್ತು ಆ ಕಂಠಕ್ಕೆ' 'ಆಶ್ಚರ್ಯದ ಉದ್ಗಾರ' 'ಅವಳ ಅನಿರೀಕ್ಷಿತ ಆಗಮನ' ಎಂಬಂಥದನ್ನು ಕ್ಲೀಷೆ ಎಂದು ಕರೆಯಲಾಗದಿದ್ದರೂ ಹುಡುಕುತ್ತಾ ಹೋದರೆ ಈ ನಿರ್ಜೀವತೆ ಮೊಳಕೆಯೊಡೆಯುವುದು ಕಾಣುತ್ತದೆ. ಒಂದೆರಡು ಜೀವಂತ ತುಣುಕು ಕೊಡುವುದು ಹೆಚ್ಚಲ್ಲ; ಬದುಕನ್ನು ನೋಡುವ ರೀತಿಯಲ್ಲೇ ಕುತೂಹಲವಿದ್ದರೆ ಜೀವಂತಿಕೆ 'ಬಾಳಿಕೆ' ಪಡೆಯುತ್ತದೆ.

'ಕಳ್ಳುಬಳ್ಳಿ' ಕತೆ ಎಷ್ಟೇ ಮನಕರಗಿಸುವಂತಿದ್ದರೂ ಜೀತ ಎಂಬುದು ದೈಹಿಕ ಮಟ್ಟದ್ದು ಎಂದು ಜಾಹ್ನವಿ ತಿಳಿದಿರುವಂತೆ ಆ ಕತೆ ಸೂಚಿಸುತ್ತದೆ. ತಿಪ್ಪನ ನೋವು ದೈಹಿಕ ಮಟ್ಟ ಮೀರಿದ್ದು; ಅವನ ಅವ್ವನ ಪರದಾಟ ತಾಯಿಯ ಪ್ರೀತಿಯನ್ನು ಮೀರಿದ್ದು. ಇದು ಜಾಹ್ನವಿಗೆ ಗೊತ್ತಾಗಬೇಕಾಗಿದೆ. ಇದು ದಲಿತನಾದವನ ನೋವು ಮಾತ್ರವಲ್ಲ, ಮನುಷ್ಯ ಹಲವಾರು ಮಟ್ಟದಲ್ಲಿ ಅನುಭವಿಸುವ 'ಭಂಗ'. ಅಸ್ಪೃಶ್ಯತೆ ಮತ್ತು ಜೀತ ಎಂಬುವುಗಳ ದುರಂತ ತಿಳಿದೊಡನೆ ಜಾಹ್ನವಿಗೆ ಅದು ಮನುಷ್ಯನ ದುರಂತ ಎಂಬುದು ಮನವರಿಕೆಯಾಗುತ್ತದೆ. 'ಗೊಗೋಲ್'ನ ಕೋಟಿನ ಕತೆ ಹೇಗೆ ಗ್ರಹಿಕೆಯ ಒಂದು ಸಂಪ್ರದಾಯವನ್ನೇ ಪ್ರಾರಂಭಿಸಿತು ಎಂಬುದು ಆ ಕತೆಯನ್ನು ಮೆಚ್ಚಿದ ದೋಸ್ತೋವ್‌ಸ್ಕಿಯ, "ನಾವೆಲ್ಲ 'ಓವರ್‌ಕೋಟ್'ನಿಂದಲೇ ಬಿದ್ದವರು" ಎಂಬುದು ಸೂಚಿಸುತ್ತದೆ.

ಜಾಹ್ನವಿ ದಲಿತ ಹೆಣ್ಣುಮಗಳು; ಬಿ.ಎಂ. ತಿಪ್ಪೇಸ್ವಾಮಿಯವರ ಮಗಳು. ಒಂದು ರೀತಿಯಲ್ಲಿ 'ಗೆದ್ದ' ದಲಿತರ ಈ ಹುಡುಗಿಯ ಅಸಹಾಯಕತೆ, ದಿಗ್ಭ್ರಮೆ ನಾನು ಜಗತ್ತನ್ನು ನೋಡುವ ರೀತಿಯ ಮೇಲೇ ಪರಿಣಾಮ ಬೀರಿದೆ. ಗೆಳೆತನ,

ವಿಶ್ವಾಸಕ್ಕಾಗಿ ಕಾತರಿಸುವ ಜಾಹ್ನವಿ ಮತ್ತು ಅವಳ ಗಂಡ ನಿರಂಜನ ಆಗಾಗ ನಮ್ಮ ಕಚೇರಿಗೆ ಬರುತ್ತಾರೆ. ದಾವಣಗೆರೆಯಲ್ಲಿ ತಮ್ಮತಮ್ಮ ಉದ್ಯೋಗದಲ್ಲಿರುವ ಇವರು ಇಸ್ಪೀಟ್ ಆಡುತ್ತಾರಂತೆ. ನಮ್ಮಲ್ಲಿ ಕೆಲವರು ಗೆಳೆಯರು ಬಂದಿದ್ದಾಗ ಈ ಜಾಹ್ನವಿಗೆ 'ಆಡ್ತೀಯಾ?' ಅಂದಾಗ ಮುಗ್ಧೆಯಂತೆ ಆಟಕ್ಕೆ ಸೇರಿಕೊಂಡು ಮುನ್ನೂರು ರೂಪಾಯಿ ಗೆದ್ದು ನಗುನಗುತ್ತಾ ಹಿಂದಿರುಗಿದಳು. ಮತ್ತೆ ಇಸ್ಪೀಟಿನ ದಿನದಂದು ಆಕೆ, ಆಕೆಯ ಗಂಡ ಬಂದಿಲ್ಲ. ಅದು ಆಕೆಯ ದಾಕ್ಷಿಣ್ಯ! ಈ ಹುಡುಗಿ ದಾವಣಗೆರೆಯಿಂದಲೇ ಫೋನ್ ಮಾಡಿ 'ಮುನ್ನುಡಿ ಬರೆಯುತ್ತೀರಲ್ಲ ಅಂಕಲ್?' ಅಂದಳು. ನಾನು ಅದೇನೋ ಶಬ್ದ ಮಾಡಿ ಸುಮ್ಮನಾದೆ. ಇದರ ಬಿಡುಗಡೆ ಇಟ್ಟುಕೊಂಡರೆ ಒಳ್ಳೆಯದು. ಆ ಬಗ್ಗೆ ಯೋಚಿಸುತ್ತಲೇ ಈ ಮಾತುಗಳನ್ನು ಬರೆದಿದ್ದೇನೆ.

**ಜನವರಿ, 1996** **–ಪಿ. ಲಂಕೇಶ್**
**ಬೆಂಗಳೂರು**

# ಲೇಖಕರ ನುಡಿ

ಇದು ನನ್ನ ಮೊದಲನೆಯ ಕಥಾಸಂಕಲನ. ಇದರ ಬಗ್ಗೆ ಓದುಗರಿಗೆ ಇರುವಷ್ಟೇ ಕುತೂಹಲ ನನಗೂ ಇದೆ. 'ವ್ಯಭಿಚಾರ', 'ಕಳೆದುಕೊಂಡವಳು', 'ತಾಯ್ತನ' ಈ ಮೂರು ಕಥೆಗಳು ಆರೇಳು ವರ್ಷಗಳ ಹಿಂದೆ ಬರೆದದ್ದು. ಆನಂತರ ಬರವಣಿಗೆ ಸಂಪೂರ್ಣ ನಿಂತಿತ್ತೆಂದೇ ಹೇಳಬೇಕು. ನನ್ನ ಆಸಕ್ತಿಯನ್ನು ಬರೆಯುವತ್ತ ತೊಡಗಿಸಿ, ನನ್ನ ಬರಹಕ್ಕೆ ಸ್ಫೂರ್ತಿಯಾಗಿದ್ದ, ಚೇತನವಾಗಿದ್ದ ಅಪ್ಪಾಜಿಯ ಅನಿರೀಕ್ಷಿತ ಸಾವು ಇದಕ್ಕೆ ಕಾರಣ. ಅಷ್ಟು ವರ್ಷಗಳ ದೀರ್ಘ ವಿರಾಮದಲ್ಲಿ ಆಗಾಗ ನಾನು ಬರೆಯಬೇಕೆಂದು ಹೇಳುತ್ತ, ಪ್ರೋತ್ಸಾಹಿಸುತ್ತ ಉತ್ತೇಜನ ನೀಡಿದವರು ಇಲ್ಲಿಯ ಪ್ರೊ. ಬಿ.ಪಿ.ವಿ. ಅಂಕಲ್, ಎಂ.ಜಿ. ಈಶ್ವರಪ್ಪ ಮುಂತಾದವರು. ಆಗಲೇ 'ವಿಮುಖ' ಸಿದ್ಧಗೊಳಿಸಿ 'ಲಂಕೇಶ್ ಪತ್ರಿಕೆ'ಗೆ ಅಳುಕುತ್ತಳುಕುತ್ತಲೇ ಕಳುಹಿಸಿದೆ. ಆದರೆ ನನ್ನ ನಿರೀಕ್ಷೆಗೂ ಮೀರಿ 'ಪತ್ರಿಕೆ' ಕಥೆ ಪ್ರಕಟಿಸುವುದರ ಜತೆಗೆ ಅಪಾರ ಪ್ರೀತಿ, ಪ್ರೋತ್ಸಾಹ, ಆದೇಶ, ಉಪದೇಶ ಧೈರ್ಯ ಕೊಡುವ ಮತ್ತು ಕೆಲವೊಮ್ಮೆ ನನ್ನ ಸೋಮಾರಿತನಕ್ಕೆ ಸಿಟ್ಟುಗೊಂಡು ಬೈಯುತ್ತ ಬರುತ್ತಿದ್ದ ಲಂಕೇಶ್ ಅಂಕಲ್‌ರ ಪತ್ರಗಳು ನನ್ನನ್ನು ಸಂಪೂರ್ಣ ಬರಹದಲ್ಲಿ ತೊಡಗಿಸಿದ್ದಲ್ಲದೆ, ಈ ಪುಸ್ತಕ ರೂಪುಗೊಳ್ಳಲು ಕಾರಣ.

ಈ ಪುಸ್ತಕದಲ್ಲಿ ಬರುವ ಕಥೆಗಳನ್ನು ಕುರಿತು ನನಗೇ ಹೇಳಿಕೊಳ್ಳಲು ಸಂಕೋಚ. ಆದರೆ ಒಂದೊಂದು ಕಥೆಯನ್ನು ಬರೆದು ಮುಗಿಸಿದಾಗಲೂ ಒಂದು ತೆರನ ಸಂತೋಷ, ಸಂಭ್ರಮದಿಂದ ಕೂಡಿದ ಬರೆಯುವ ಧನ್ಯತೆ ಮೂಡಿಸಿವೆ. ನನ್ನ ಈ ಮೊದಲ ಕೃತಿಯನ್ನು ನೀವೆಲ್ಲರೂ ತೆರದ ಮನಸ್ಸಿಂದ ಸ್ವಾಗತಿಸಿ, ನನಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಕೊಟ್ಟು, ಸಹಕರಿಸುವಿರೆಂದು ನಂಬಿದ್ದೇನೆ.

ಈ ಪುಸ್ತಕವನ್ನು ನನ್ನ ಅಪ್ಪಾಜಿಗೆ ಹಾಗು ಲಂಕೇಶ್ ಅಂಕಲ್‌ರವರಿಗೆ ಅರ್ಪಿಸುತ್ತಿರುವೆ. Books are best friends ಎಂದು ಹೇಳುತ್ತ ಬರೆಯುವ ಆಸಕ್ತಿಯನ್ನು ನನ್ನಲ್ಲಿ ಚಿಗುರಿಸಿದ್ದು ಅಪ್ಪಾಜಿಯಾದರೆ, ಅದಕ್ಕೆ ನೀರೆರುದು ಪೋಷಿಸಿ, ಬೆಳೆದು ನಿಲ್ಲುವಂತಾಗಲು ಕಾರಣ ಲಂಕೇಶ್ ಅಂಕಲ್. ಅವರಿಂದಾಗಿ ಬರೆಯುವಲ್ಲಿ ಸಂಭ್ರಮ, ಸಂತೃಪ್ತಿ, ನೆಮ್ಮದಿ, ಧನ್ಯತೆಯನ್ನು ಕಂಡುಕೊಂಡಿದ್ದೇನೆ.

**ಜನವರಿ, 1996** **-ಬಿ.ಟಿ. ಜಾಹ್ನವಿ**
**ದಾವಣಗೆರೆ**

ತಂದೆ ಡಾ. ಬಿ.ಎಂ. ತಿಪ್ಪೇಸ್ವಾಮಿ

ಮತ್ತು

ಪಿ. ಲಂಕೇಶ್

ಇವರಿಗೆ

# ಪರಿವಿಡಿ

# ವಿಮುಖ

ಮೈಯೆಲ್ಲಾ ನೋವು, ಭಾರ, ಏಳೋಕೆ ಮನಸ್ಸೇ ಇಲ್ಲ, ಆದ್ರೂ ಏಳ್ಲೇಬೇಕು. ಇವತ್ತು ಹೊಸ ಮ್ಯಾನೇಜರ್ ಬರುವವನಿದ್ದಾನೆ. ಆದ್ದರಿಂದ ಆಫೀಸಿಗೂ ತಪ್ಪಿಸುವ ಹಾಗಿಲ್ಲ. ಪ್ರತಿಸಾರಿ ರಘು ಜೊತೇಲಿ ಮಲಗಿದಾಗ್ಲು ಇದೇ ಗೋಳು. ಒಳ್ಳೆ ಜ್ವರ ಬಂದಹಾಗೆ ಮೈಯೆಲ್ಲಾ ಆಲಸ್ಯದಿಂದ ತುಂಬಿರುತ್ತೆ. ಪಕ್ಕಕ್ಕೆ ತಿರುಗಿದರೆ ಅವನು ಹಾಯಾಗಿ ಮಲಗಿದ್ದಾನೆ. ಮುಖ ನೋಡಿದರೆ ಎಷ್ಟೊಂದು ಮೆದು. ಆದರೆ ಹಾಸಿಗೇಲಿ ಅಷ್ಟೇ ಒರಟ. ಆ ಒರಟುತನಕ್ಕೇ ಜೀವ ರೋಸಿಹೋಗಿದೆ. ಆದರೂ ಅವನೆಂದರೆ ಏನೋ ಪ್ರೀತಿ, ವಿಶ್ವಾಸ. ಅವನ ರೀತಿಯೇ ವಿಚಿತ್ರ. ಅವನು ಪ್ರೇಮಿಯೋ, ಕಾಮಿಯೋ ಎನ್ನುವ ಅನುಮಾನ ಹುಟ್ಟುತ್ತದೆ ಕೆಲ ವೊಮ್ಮೆ. ಮನಸ್ಸು ಕಾಮಕ್ಕೇ ನಿಂತಾಗ ಬಹುಶಃ ಪ್ರೇಮದ ಆ ಸವಿ ಬೇರೆಯೇ ಏನೋ. ಸ್ನೇಹ, ಸಲುಗೆ; ಕಣ್ಣಂಚಿನ ನೋಟ; ತುಟಿಯಂಚಿನ ನಗು; ಮನದಾಳದ ಮಾತು ರಂಗು ಕಳೆದು ಬೆಲೆಯೇ ಇಲ್ಲದಂತೆ ಆಗುವುದೋ ಏನೋ..........

ಅಪ್ಪನ ತಂಗಿಯ ಮಗ ರಘು ಮಾವ ಹಣವಂತ. ಅಪ್ಪ ಸತ್ತ ನಂತರ ಕುಟುಂಬಕ್ಕೆ ದಿಕ್ಕಾದ. ಅಕ್ಕನ ಮದುವೆ, ತಮ್ಮನ ವಿದ್ಯಾಭ್ಯಾಸ, ತನ್ನ ಕೆಲಸ ಎಲ್ಲಕ್ಕೂ ಜವಾಬ್ದಾರನಾದ. ಅವರ ಋಣವೂ ಇವರ ಮೇಲಿತ್ತು. ಎಂದೋ ಮದುವೆಯಾಗಿ ಹೋಗಬೇಕಿತ್ತು. ಆದರೆ ತೊನ್ನಿದ್ದ ರಘುವಿನ ತಂಗಿಯ ಸಲುವಾಗಿ ಮುಂದಕ್ಕೋಗುತ್ತಲೇ ಇತ್ತು. ಇವನೇನು ಮದುವೆಗೆ ಅಂತಹ ಅವಸರ ವ್ಯಕ್ತಪಡಿಸುತ್ತಿರಲಿಲ್ಲ. ಆದರೆ ಇವಳ ಮನದಲ್ಲಿ ಆ ಬಯಕೆ ಆಗಾಗ ಮೂಡುತ್ತಿತ್ತು. ಆ ಮೊರೆ ದೇವರಿಗೆ ಕೇಳಿಸಿತೋ ಎಂಬಂತೆ ಪುಣ್ಯಾತ್ಮನೊಬ್ಬ ತಂಗಿಗೆ ತೊನ್ನಿದ್ದರೂ ಪರ್ವಾಗಿಲ್ಲ ಮದುವೆಗೆ ಸಿದ್ಧ ಎಂದು ಮುಂದೆ ಬಂದಾಗ,

ಹಿರಿಯರೆಲ್ಲಾ ಎರಡೂ ಲಗ್ನ ಒಟ್ಟಿಗೆ ಮಾಡಲು ನಿಶ್ಚಯಿಸಿ, ನಿಶ್ಚಿತಾರ್ಥದ ಉಂಗುರಗಳು ಇವರುಗಳ ಬೆರಳುಗಳನ್ನು ಅಲಂಕರಿಸಿ ಆಗಲೇ ವರ್ಷವಾಗುತ್ತ ಬರುತ್ತಿದೆ.

ಮುಂದೆ ಬಿದ್ದಿರುವ ಫೈಲುಗಳನ್ನು ನೋಡಿ ತಲೆಸಿಡಿತ ಹೆಚ್ಚಾಗುತ್ತ ಹೋಗುತ್ತಿದೆ. ಪಕ್ಕದ ಟೇಬಲಿನಲ್ಲಿದ್ದ ಸರಸು "ಯಾಕೆ ಮೈತ್ರ ಒಂಥರಾ ಇದ್ದೀ? ಇತ್ತೀಚೆಗಂತೂ ನೀನು ತುಂಬಾ ಡಲ್ಲಾಗಿರ್ತಿ. ಮೊದಲಿನ ಆ ಹಸನ್ಮುಖ, ಉಲ್ಲಾಸ, ಲವಲವಿಕೆ ಎಲ್ಲೋಯ್ತೋ.......?" ಎಂದು ಕೇಳಿದಾಗ ನೀರಸ ನಗುವೇ ಅದಕ್ಕೆ ಪ್ರತಿಕ್ರಿಯೆ. "ಇವೊತ್ತು ಹಾಸ್ಟೆಲ್ಲಿಗೆ ಬರ್ತಿಯೋ ಹ್ಯಾಗೆ? ಫಸ್ಟ್ ಶೋ ಸಿನಿಮಾಗಾದ್ರು ಹೋಗೋಣ...." ಎಂಬ ಸರಸು ಮಾತಿಗೆ ಬರೀ "ಇಲ್ಲ......" ಎಂಬ ಉತ್ತರ ಸಿಕ್ಕಾಗ ಮಾತು ಮುಂದುವರಿಯಲಿಲ್ಲ. ತಿಂಗಳಲ್ಲಿ ಇಪ್ಪತ್ತೈದು ದಿನಗಳು ಬಿಸಿನೆಸ್ ಟೂರ್ ಎಂದು ಹೊರಗೇ ಉಳಿಯುವ ರಘು ಈಗೊಂದು ಎಂಟು ದಿನ ಫ್ರೀ ಎಂದಿದ್ದ. ಸಂಜೆ ಅವನ ಸ್ನೇಹಿತನ್ಯಾರೋ ಒಬ್ಬನಿಗೆ ಊಟಕ್ಕೆ ಆಹ್ವಾನವಿದ್ದರಿಂದ ರಾತ್ರಿಗೆ ವಿಶೇಷ ಅಡುಗೆಯಾಗಬೇಕಿತ್ತು. ಇರುವುದೇನೋ ಹಾಸ್ಟೆಲ್‌ನಲ್ಲೇ ಆದರೂ ರಘು ಊರಿನಲ್ಲಿ ಇದ್ದಾಗ, ಅವನು ಇರುವಷ್ಟು ದಿನಗಳೂ ಅವನ ಮನೇಲೇ ಬಿಡಾರ. ಹಾಸ್ಟೆಲ್ ವಾರ್ಡನ್ ಅವನಿಗೆ ಚೆನ್ನಾಗಿ ಪರಿಚಯವಿದ್ದರಿಂದ ಯಾವ ನಿರ್ಬಂಧವೂ ಇರಲಿಲ್ಲ. ಹಳ್ಳಿಯಲ್ಲಿರುವ ಹಿರಿಯರಿಗೆ ಈ ಯಾವ ವಿಷಯಗಳು ತಿಳಿಯುವಂತಿರಲಿಲ್ಲ. ಒಂದು ವೇಳೆ ತಿಳಿದರೂ 'ಯಾಕ್ಹೀಗೆ.....' ಎಂದು ಕೇಳುವ ಗಟ್ಟಿತನ ಯಾರಿಗೂ ಇಲ್ಲ. ಹಾಗಾಗಿ ಮನೆಯಲ್ಲಿ ಗೊತ್ತಾದರೇ ಎಂಬ ಅಳುಕು, ಹೆದರಿಕೆ ಇಬ್ಬರಿಗೂ ಇಲ್ಲ. ಆದರೂ ರಘುವಿನ ಮನೆಯಲ್ಲಿ ಉಳಿಯುವ ಅಭ್ಯಾಸವಿಲ್ಲದ ಮೊದಲಿಗೆ ಆ ಒಡನಾಟಕ್ಕೆ ಒಂದು ಅರ್ಥವಿತ್ತು. ರಘು ಒಳ್ಳೆ ಮಾತುಗಾರ. ಎಲ್ಲವನ್ನೂ ಮರೆಸುವ ಮೋಡಿಯಿತ್ತು ಆ ಕಂಠಕ್ಕೆ. ಅವನ ಎದೆಗೊರಗಿ, ಆ ಮಾತುಗಳನ್ನು ಕೇಳುತ್ತಿದ್ದರೆ ಪ್ರಪಂಚದ ಪರಿವೇ ಇರುತ್ತಿರಲಿಲ್ಲ. ಅದು ಅತ್ಯಂತ ಪ್ರಿಯವಾದದ್ದು ಹೌದು. ಆಫೀಸಿಗೆ ರಜೆ ಹಾಕಿ, ದಿನವಿಡೀ ಊರೆಲ್ಲಾ ಸುತ್ತಾಡಿ, ಮನದಣಿಯೆ ಮಾತಾಡಿ, ರಾತ್ರಿ ಹಾಸ್ಟೆಲ್ಲಿಗೆ ಹಿಂದಿರುಗಿ ಕಣ್ಮುಚ್ಚಿದರೆ ಸುಂದರ ಸ್ವಪ್ನಗಳೇ ಸ್ವಪ್ನಗಳು! ಈಗಿನಂತೆ ದಿನಗಳು ಕುಂಟುತ್ತಾ ಸಾಗುತ್ತಿರಲಿಲ್ಲ, ಆಗ ಹಾರುತ್ತಾ ಹೋಗುತ್ತಿದ್ದವು.

ಎಂದಿನಂತೆ ಬಸ್ಸಿಗಾಗಿ ಕಾಯದೆ ಆಟೋ ಹಿಡಿದು ಮನೆ ತಲುಪಿದಾಗ ರಘು ಮನೆಯಲ್ಲೇ ಇದ್ದ. ಅಡುಗೆಯ ತಯಾರಿಗೆ ಸಹಾಯ ಮಾಡುತ್ತ ಮಾತಿಗೆ ತೊಡಗಿದ. "ನೋಡು ಮೈತ್ರ, ನಿಂಗೆ ಭರತ್ ಇಷ್ಟ ಆಗ್ಲಿಲ್ಲಾಂದ್ರೆ ನನ್ನ ಬೈಬೇಡ. ಅವ್ನು ನಿಂಗೆ ಇಷ್ಟ ಆಗೋದೂ ಇಲ್ಲ ಬಿಡೂ....... ತುಂಬಾ ಖಯಾಲಿ ಮನುಷ್ಯ. ನಂಗೆ ಅವ್ನು ಬಾಂಬೇಲಿ ಪರಿಚಯ ಆಗಿದ್ದು. ಅವ್ನಿಗೆ ಅಪ್ಪ, ಅಮ್ಮ ಹಿಂದೆ ಮುಂದೆ ಯಾರೂ ಇಲ್ಲ. ದಿಕ್ಕಿಲ್ದೆ ಇರೋ ಒಬ್ಬ ವಯಸ್ಸಾದ ಹೆಂಗ್ಸಿದ್ದಾಳೆ. ಸದ್ಯಕ್ಕೆ

ಅವ್ನಿಗೆ ಆಕೇನೇ ಎಲ್ಲಾ. ನೀನು ನಂಬ್ತಿಯೋ ಇಲ್ವೋ ಮೈತ್ರ...... ಅವ್ನಿಗೆ ದಿನಕ್ಕೊಬ್ಬ ಹುಡ್ಗಿ ಬೇಕು. ಮತ್ತೆ ಒಂದು ಹುಡ್ಗಿ ಜೊತೆ ಒಂದ್ಸಾರಿ ಮಲ್ಗಿದ್ರೆ ಮುಗೀತು ಇನ್ನೊಮ್ಮೆ ಆಕೆ ಕಡೆಗೆ ಕಣ್ಣೆತ್ತಿ ಸಹ ನೋಡೋಲ್ಲ. ಇದುವರೆಗೂ ಅವ್ನು ಕಣ್ಣಿಟ್ಟ ಯಾವುದೇ ಹುಡ್ಗಿ ಅವ್ನಿಂದ ತಪ್ಪಿಸ್ಕೋಳ್ಳೋಕೆ ಸಾಧ್ಯವಾಗಿಲ್ಲ. ಹೇಗಾದ್ರು ಅವರ್ನ ಬಲೆಗೆ ಬೀಳಿಸ್ತಾನೆ. ಬಡ್ಡೀಮಗ......! ಸಕತ್ ಎಂಜಾಯ್ ಮಾಡ್ತಾನೆ ಲೈಫ್‌ನ.......'' ಕೊನೆಯ ಮಾತು ಆಶ್ಚರ್ಯ ತರಿಸಿದ್ರೂ ತೋರಿಸಿ ಕೊಳ್ಳದೆ ''ದಿನಕ್ಕೊಂದು ಹೆಣ್ಣನ್ನ ಹಾಳ್ಮಾಡೋ ಬದ್ಲು ಯಾರ್ನಾದ್ರು ಮದ್ವೆಯಾಗಿ ಸಂಸಾರ ಮಾಡ್ಬಹುದಲ್ಲಾ....'' ಎಂದಾಗ ರಘು ಜೋರಾಗಿ ನಕ್ಕ. ಅಷ್ಟರಲ್ಲಿ ಹೊರಗೆ ಗೇಟಿನ ಸದ್ದಾಗಿ ಅತ್ತ ಹೊರಡುತ್ತಾ ಹೇಳಿದ ''ಅವ್ನೆ ಬಂದಾಂತ ಕಾಣುತ್ತೆ........ ಸಾಯೋವರ್ಗೂ ಒಂದೇ ಹೆಣ್ಣಿಗೆ ಜೋತು ಬೀಳೋರೆಲ್ಲ ಫೂಲ್ಸ್ ಅಂತಾನೆ ಅವ್ನು. ಅವ್ನೆದುರ್ಗೆಯಲ್ಲಾದ್ರು ಹಾಗೇ ಮಾತಾಡ್ಬಿಟ್ಟೀಯೆ ಮತ್ತೆ......'' ರಘುವಿನ ಬಾಯಲ್ಲಿ ಇಂತಹ ಮಾತುಗಳನ್ನು ಕೇಳಿ ಮನಸೇಕೋ ಮುದುಡಿತು.

ಭರತ್ ಬಾಂಬೆಯಿಂದ ಬಂದು ತಿಂಗಳಾಗುತ್ತ ಬಂದರೂ ತಿರುಗಿ ಹೋಗುವ ಸೂಚನೆಗಳೇ ಕಾಣಲಿಲ್ಲ. ಯಾವಾಗಲೂ ಟೂರ್ ಎಂದು ಬ್ಯುಸಿಯಿರುತ್ತಿದ್ದ ರಘುವೂ ಅವನೊಡನೆ ಫ್ರೀಯಾದ. ಮೊದಲ ಭೇಟಿಯಲ್ಲೆ ಒಂದೇ ನೋಟಕ್ಕೆ ಮೈತ್ರಳನ್ನು ಆಳೆದುಬಿಟ್ಟವು ಭರತ್‌ನ ಕಣ್ಣುಗಳು. ಎಷ್ಟೇ ಮಾತಾಡಿಸಿದರೂ, ಏನೇ ಕೇಳಿದರೂ ಕೇವಲ ಒಂದೇ ಮಾತಿನಲ್ಲಿ ಉತ್ತರಿಸುವ, ಸದಾ ಗಂಭೀರವಾ ಗಿರುವ ಆ ವ್ಯಕ್ತಿತ್ವ ಅವನನ್ನು ಆಗಾಗ ಹುಚ್ಚೆಬ್ಬಿಸುತ್ತಿತ್ತು. ರಘುವಿನ ಹೆಂಡತಿ ಯಾಗುವವಳೆಂದು ಸಂಯಮ ತಂದುಕೊಂಡರೂ ಕೆಲವೊಮ್ಮೆ ರಘು ಆಡುವ ಮಾತುಗಳೇ ಅವನಿಗೆ ಉತ್ತೇಜನ ಕೊಡುವಂತಿರುತ್ತಿದ್ದವು. ''ನಿಜವಾದ ಅರ್ಥ ದಲ್ಲಿ ಲೈಫ್‌ನ ಎಂಜಾಯ್ ಮಾಡ್ತಿರೋನು ನೀನೇ ಕಣೋ. ಐ ರಿಯಲೀ ಎನ್ವಿ ಯೂ ಯಾರ್...... ಆದ್ರೇನ್ಮಾಡೋದು ನಿನ್ನಷ್ಟು ಧೈರ್ಯ ನನಗಿಲ್ಲ ಬಿಡು. ನೀನ್ಯಾವ್ದೇ ಕಮಿಟ್ ಮಾಡ್ಕೊಳ್ಳೋದಿಲ್ವಲ್ಲಾ........? ಯಾವ್ದೇ ಬಂಧನಕ್ಕೆ ಸಿಲುಕ್ದೆ ಯಾವೊಂದು ಅಳುಕೂ ಇಲ್ದೆ ಫ್ರೀಯಾಗಿ ಇರೋಕೆ ಹ್ಯಾಗೆ ಸಾಧ್ಯವೋ ನಿಂಗೆ? ಇತ್ತೀಚೆಗೆ ನನ್ನಲ್ಲೇ ಆಗ್ತಿರೋ ಬದಲಾವಣೆಗಳನ್ನ ಗಮನಿಸಿದ್ರೆ ನಿನ್ನ ಮಾತುಗಳು ತುಂಬಾ ಸತ್ಯ ಅನ್ನಿಸುತ್ತೆ. ನಮ್ಮ ಸ್ನೇಹ, ಪ್ರೇಮ ಹೆಚ್ಚೂಕಮ್ಮಿ ನಾಲ್ಕೈದು ವರ್ಷದ್ದು. ಈಗೊಂದ್ವರ್ಷದಿಂದ ನಮ್ಮಿಬ್ಬರಲ್ಲಿ ದೈಹಿಕ ಸಂಬಂಧಾನೂ ಏರ್ಪಟ್ಟಿದೆ. ಆದರೆ ಈಗೀಗ ಮೊದಲಿನ ಆಸಕ್ತಿ ನನ್ನಲ್ಲಿ ಉಳಿದಿಲ್ಲ. ದಿನೇದಿನೇ ನಮ್ಮ ಸಂಬಂಧ ಹಳಸ್ತಾ ಇದೆ ಅನ್ಸುತ್ತೆ........ ಆಕರ್ಷಣೆ ಇಲ್ದೆ ಹೋದ್ರು ದೇಹದ ಬಯಕೆ ತಡೀಲಾರ್ದೆ ಅನುಭವಿಸ್ತೀನಿ. ಕಮಿಟ್ ಮಾಡ್ಕೊಂಡಿರೋದ್ರಿಂದ ಇದರಿಂದ ತಪ್ಪಿಸ್ಕೊಳ್ಳೊ ಮಾತೇ ಇಲ್ಲ....... ಯಾಕಂದ್ರೆ, ಮರ್ಯಾದೆ ಪ್ರಶ್ನೆ ನೋಡು. ಅದೂ ಅಲ್ದೆ, ಯಾವತ್ತಿದ್ರೂ ಮದ್ವೆಯಾಗ್ಲೇಬೇಕು. ಇವ್ಳೂ ಒಳ್ಳೆ ಹೆಂಡ್ತಿಯಾಗೋಕೆ ಬಲು ಲಾಯಕ್ಕಾದ ಹುಡ್ಗಿ. ಯಾವೊಂದು ತಂಟೆ ತಗಾದೆ

ಇಲ್ದೆ ಹೇಳ್ದಾಗೆ ಕೇಳ್ಕೊಂಡು ಇರೋ ಸ್ವಭಾವದೋಳು....... ಹೀಗೇ ನೋಡೋ ನಮ್ ಲೈಫ್ನಲ್ಲಿ ಯಾವ್ದೇ ಚಾರ್ಮಿಲ್ಲ; ಚೇಂಜಿಲ್ಲ. ಕೇವಲ ಕಟ್ಟುಪಾಡುಗಳ ದಾರಕ್ಕೆ ನೇತಾಡ್ತಿರೋ ಸೂತ್ರದ ಗೊಂಬೆಗಳು ನಾವು ಅಷ್ಟೆ......'' ಬರೀ ನಿಟ್ಟುಸಿರೇ ನಿಟ್ಟುಸಿರು. ಆಗಾಗ ಕಿವಿಗೆ ಬೀಳುವ ಈ ನಿಟ್ಟುಸಿರು 'ಒಂದು ಕೈ ನೋಡಬಾರದೇಕೆ......?' ಎಂಬ ಬಯಕೆಯನ್ನ ಭರತನ ಮನಸ್ಸಿನಲ್ಲಿ ಹುಟ್ಟಿ ಸುತ್ತಲೇ ಇದೆ. ಹೆಣ್ಣುಗಳ ವಿಷ್ಯಕ್ಕೆ ಬಂದಾಗ ನೀತಿ, ನಿಯತ್ತು ಯಾವೊಂದೂ ಕಟ್ಟುಪಾಡುಗಳಿಲ್ಲ. ಬೇಕೆಂದರೇ ಮುಗೀತು. ಈ ಜೀವನದಲ್ಲಿ ಬಂದುಹೋದ ಹೆಣ್ಣುಗಳಿಗೆ ಲೆಕ್ಕವಿಲ್ಲ. ಮೋಜಿಗಾಗಿ ಬಂದವರೆಷ್ಟೊ; ಸುಖ ಬಯಸಿ ಬಂದ ಅತೃಪ್ತ ಹೆಣ್ಣುಗಳೆಷ್ಟೊ; ನೇರವಾಗಿ ಬರಲಾರದೆ, ಬಲತ್ಕಾರಕ್ಕೊಳಪಟ್ಟಂತೆ ನಟಿಸುತ್ತಾ ಸುಖಪಡುವ ಹೆಣ್ಣುಗಳೆಷ್ಟೊ. ರಘುವಿನ ಮಾತು ಕೇಳಿದರೆ ಆ ಅತೃಪ್ತಿ ಇವಳಲ್ಲೂ ಇದ್ದೇ ಇರಬೇಕು. ಏಕೆಂದ್ರೆ ಇಬ್ಬರಲ್ಲಿ ಒಬ್ಬರಿಗೆ ಆಸಕ್ತಿ ಕ್ಷೀಣಿಸಿದರೂ ಅದರ ಪರಿಣಾಮ ಇಬ್ಬರ ಮೇಲೂ ಒಂದೇ ರೀತಿಯದ್ದಾಗಿರುತ್ತೆ ಎಂಬುದಂತೂ ಸತ್ಯ. ಆಕೇನ ಒಲಿಸುವುದು ಕಷ್ಟವಾಗಲಾರ್ದು ಅನ್ನಿಸಿದ್ರೂ ಅಪ್ಪಿತಪ್ಪಿಯೂ ತನ್ನತ್ತ ಕಣ್ಣಾಯಿಸದ ಅವಳ ರೀತಿ ಅವನಿಗೊಂದು ಸವಾಲು. ಆಗಾಗ ಮೈತ್ರಳ ಮೇಲೆ ಹರಿದಾಡುವ ಆ ನೋಟದ ಅರಿವಿದ್ದರೂ ಅರಿಯದವನಂತಿದ್ದ ರಘು. ಅವನದು ಇಬ್ಬಗೆಯ ಮನಸ್ಥಿತಿ. ಭರತನ ಗುಣ ತಿಳಿದೂ ಮಾಡಿರುವ ಸ್ನೇಹವದು. ಆಗಾಗ ಧೂರ್ತ ಯೋಚನೆಗಳೂ ಬಾರದಿರವು. ಮರುಕ್ಷಣ ಆ ಯೋಚನೆ ತಪ್ಪು ಎನಿಸುತ್ತಲೂ ಇತ್ತು. ಅವನ ಮನಸ್ಸೊಂದು ಗೊಂದಲದ ಗೂಡು. ಈ ಮನಸ್ಥಿತಿಯ ಅರಿವು ಇರದಿದ್ದರೂ ಭರತನ ಕೆಟ್ಟ ನೋಟದ ಹೊಂಚು ತಿಳಿಯುತ್ತಿತ್ತು ಮೈತ್ರಾಗೆ. ರಘುವಿನ ಮೌನವೋ ಒಂದು ಒಗಟಿನಂತಿತ್ತು. ಏನೇ ಆದರೂ ಭರತನಿಗೊಂದು ಅವಕಾಶ ಒದಗಿಯೇ ಒದಗಿತು. ರಘು ಒಂದು ದಿನದ ಮಟ್ಟಿಗೆ ಹಳ್ಳಿಗೆ ಹೋದ ದಿನ ಮೈತ್ರ ಭರತನ ಕೈಗೆ ಒಂಟಿಯಾಗಿ ಸಿಕ್ಕಳು. ಈ ಅವಕಾಶವನ್ನು ಯಾವುದೇ ಕಾರಣಕ್ಕೂ ಕಳೆದುಕೊಳ್ಳಲು ಅವನು ಸಿದ್ಧನಿರಲಿಲ್ಲ. ಅವಳೂ ಶಕ್ತಿಮೀರಿ ಹೋರಾಡಿದಳು, ಪ್ರತಿಭಟಿಸಿದಳು. ಆದರವನು ಅಷ್ಟೇ ಬಲವಾಗುತ್ತ ಹೋದ. ತುಟಿಯೊಡೆದು, ರಕ್ತ ಸೋರುವಂತೆ ಕೆನ್ನೆಗೊಂದು ಬಾರಿಸಿದಾಗ ಅವನು ಪಶುವಾದ. ಬಲವೆಲ್ಲ ಸೋರಿ, ದೇಹ ದಣಿದು ನಡೆಯು ವುದರಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ ಎಂಬ ಸತ್ಯ ನಿಚ್ಚಳವಾಗಿ, ಮನಸ್ಸು ಶರಣಾಗತ ಬಯಸಿತು. ಬಲಾತ್ಕಾರದಿಂದ ನಡೆಯುವುದೂ ಅದೇ, ಒಪ್ಪಿಕೊಂಡರೆ ನಡೆಯುವುದು ಅದೇ......... ಒಪ್ಪಿಕೊಂಡರೆ ಹಿಂಸೆಯೆನಿಸದು ಎನ್ನಿಸಿದಾಗ ಒಳಗಿನ ಕೋಲಾಹಲ ಕ್ಷೀಣಿಸಿ, ಮೆಲ್ಲಮೆಲ್ಲಗೆ ಧೈರ್ಯ ಮೂಡಿ ಬಂದು ಮಿಸುಕಾಡದೆ ನಿಂತರೂ ಒರಟು ಕೈಗಳಲ್ಲಿ ಸಿಕ್ಕ ದೇಹ ನಲುಗಿ, ಅವನ ಹಲ್ಲುಗಳು ಕೆನ್ನೆಯಲ್ಲಿ ಆಳವಾಗಿ ಇಳಿದಾಗ "ಅಮ್ಮಾ......" ಎಂಬ ಚೀತ್ಕಾರದೊಡನೆ, ಕಣ್ಗಳಲ್ಲಿ ನೋವಿಗೆ ಉಕ್ಕಿದ ನೀರು ಕೆನ್ನೆಯ ಮೇಲಿಳಿದವು. ರೋಷ ಹೆಪ್ಪುಗಟ್ಟಿದ್ದ ಆ ಮುಖ ಮತ್ತೊಮ್ಮೆ ಅದೇ ಕೆನ್ನೆಯತ್ತಲೇ ಬಾಗಿದಾಗ ಮೈಯೊಮ್ಮೆ ಅದುರಿತು.

ನಡುಗುತ್ತಾ ಹೊರಬಂದವು ಮಾತುಗಳು. "ಪ್ಲೀಸ್‌ರೀ....... ಪ್ಲೀಸ್, ಪ್ಲೀಸ್........ ದಯವಿಟ್ಟು, ದಯವಿಟ್ಟು ಈ ರೀತಿ ಮಾತ್ರ ನೋಯಿಸ್ಬೇಡಿ........" ಇದನ್ನು ಆಲಿಸಿದ್ದೆ ಸೊಟ್ಟಗಾದ ತುಟಿಗಳನ್ನು ಕಂಡು ಹೆಚ್ಚಿದ ಅಧೀರತೆಯಿಂದ ಕಣ್ಣುಗಳು ಬಿಗಿಯಾಗಿ ಮುಚ್ಚಿ, ಅವುಡುಗಚ್ಚಿ, ಮೈಯೆಲ್ಲಾ ಬಿಗಿದು, ಎರಡೂ ಪಕ್ಕಕ್ಕೆ ಕೈಗಳು ಬಟ್ಟೆಯುನ್ನು ಮುಷ್ಠಿ ಹಿಡಿದು ನಡುಗುತ್ತಾ ನಿಂತ ಆ ಭಂಗಿ ಅವನಿಗೆ ತೀರಾ ಹೊಸದು. ಸ್ವಲ್ಪ ಹೊತ್ತು ಹಾಗೇ ನೋಡುತ್ತಿದ್ದಾಗ ಏನೋ ಎಂತೋ ಆ ಭಂಗಿ ಅವನೊಳಗೆ ಇದುವರೆಗೂ ತಿಳಿಯದ ಹೊಸ ಭಾವನೆಯೊಂದು ಮೂಡಿಸಿ, ಹೆಪ್ಪುಗಟ್ಟಿದ್ದ ರೋಷವನ್ನು ಕರಗಿಸುತ್ತಾ, ಒರಟನ್ನು ಮೆದುವಾಗಿಸಿ, ಕೆಂಪಗಾಗಿದ್ದ ಕೆನ್ನೆಯನ್ನು ಸವರುತ್ತ ದೇಹವನ್ನು ತೋಳುಗಳೊಳಕ್ಕೆ ಸೆಳೆದು ಮೃದುವಾದ, ದೀರ್ಘ ಚುಂಬನ ನೀಡುತ್ತ ಇದುವರೆಗೂ ಅದುರುತ್ತಿದ್ದ ದೇಹವನ್ನು ಬೆಚ್ಚಗಾಗಿಸಿ, ಹಗುರಾಗಿಸಿ ಮೈಮರೆಸಿತು.

ಸರಸಳಿಗಂತು ಆಶ್ಚರ್ಯವೋ ಆಶ್ಚರ್ಯ. ಎರಡು ವರ್ಷದ ಹಿಂದಿನ ಮೈತ್ರ ದಿಢೀರೆಂದು ಎಲ್ಲಿಂದಿಳಿದಳು? "ಏನೇ ವಿಷ್ಯ? ಮುಖದ ತುಂಬಾ ನಗು ಹರಡ್ಕೊಂಡು ಓಡಾಡ್ತಿದ್ದಿಯಲ್ಲಾ.......!? ಮುಖದಲ್ಲಿ ಅಷ್ಟೊಂದು ಗೆಲುವು, ಕಣ್ಣಲ್ಲಿ ಹೊಳಪು ಏನ್ಸಮಾಚಾರ? ಯಾರೋ ಹೊಸಬರನ್ನ ನೋಡ್ದಾಗೆ ಅನ್ನಿಸ್ತಿದೆ......!" ಈ ಮಾತು ಕೇಳಿದ್ದೇ ತೃಪ್ತಿಯ ನಗೆಯರಳಿತು ಮುಖದಲ್ಲಿ. ಅವಳೊಳಗೆ ಉಕ್ಕುತ್ತಿದ್ದ ಉತ್ಸಾಹ, ಸಂಭ್ರಮ, ಉಲ್ಲಾಸ ಅವಳಿಗೇ ಒಂದು ಒಗಟು. ಆ ದಿನದ ಘಟನೆಯ ಬಗ್ಗೆ ಎಷ್ಟೇ ಯೋಚಿಸಿದರೂ ಜಾರಿದೆನೆಂದೋ ಕಲಂಕಿತಳಾದೆ ಎಂದೋ ಅನ್ನಿಸುತ್ತಲೇ ಇಲ್ಲ. ಹಾಗೇ ನೋಡಿದರೆ ರಘುವಿನೊಡನೆ ಮೊದಮೊದಲು ಸೇರಿದಾಗ ಎಷ್ಟೊಂದು ಸಂಕೋಚ, ಅಳುಕು, ತಪ್ಪು ಮಾಡುತ್ತಿರುವೆನೆಂಬ ಭಾವನೆ ಸದಾ ಕೊರಗಿಸುತ್ತಿತ್ತು. ಆದರೆ ಇಲ್ಲೇನೋ ಬದಲಾವಣೆ. ಭರತನೆಂದರೇ ಹೇಸಿಕೊಳ್ಳುತ್ತಿದ್ದ ಮನಸ್ಸು ಅಂದು, ಇಷ್ಟವಿಲ್ಲದೆ ಹೋದರೂ ಕೇವಲ ತಪ್ಪಿಸಲಾಗದಲ್ಲಾ ಎಂಬುದಕ್ಕೆ ಒಪ್ಪಿಕೊಂಡು ಪೂರ್ಣ ಮೈಮರೆತು, ಅವನಲ್ಲಿಯೇ ಸೇರಿಹೋಗಿದ್ದು ಒಂದು ಪವಾಡದಂತೆ ತೋರುತ್ತಿತ್ತು. ರಾತ್ರಿಯೆಲ್ಲಾ ಮೈಮರೆಸಿ, ಬೆಳಗ್ಗೆ ಕಣ್ಬಿಡುವುದರಲ್ಲಿ ಮರೆಯಾಗಿದ್ದ ಅವನು ಒಬ್ಬ ವುಮನೈಸರ್‌ನಿಂದ ಇನ್ನೇನು ತಾನೆ ನಿರೀಕ್ಷಿಸಲು ಸಾಧ್ಯ? ಅಲ್ಲದೆ, ಕೇವಲ ಜೊತೇಲಿ ಮಲಗಿದ್ದಕ್ಕೆ ಏನನ್ನಾದರೂ ನಿರೀಕ್ಷಿಸಿದರೆ ಅದಕ್ಕಿಂತ ಮೂರ್ಖತನ ಇನ್ನೇನಿದ್ದಿತು? ಇದರ ಬಗ್ಗೆ ಹೆಚ್ಚಿಗೆ ತಲೆ ಕೆಡಿಸಿಕೊಳ್ಳಲಿಲ್ಲ. ಯಾಂತ್ರಿಕ ಜೀವನಕ್ಕೆ ಸಿಕ್ಕು ಜಡ್ಡುಗಟ್ಟಿದ್ದ ಮೈಮನಸ್ಸು ಹೊಸತನ ಕಂಡುಕೊಂಡಿದ್ದೆ ಸಂತೃಪ್ತಿ. ರಘುವಿಗೆ ತಿಳಿಸುವ ಅಗತ್ಯವಿಲ್ಲ ಎನಿಸಿತು; ತಿಳಿಸಲಿಲ್ಲ. ಆದರೆ ರಘುವೇಕೋ ಮಂಕಾಗಿದ್ದ. ಮದುವೆಯ ದಿನ ಹತ್ತಿರ ಬರುತ್ತಿತ್ತು. ಅದರ ಪಾಡಿಗದು ಬರುತ್ತಿತ್ತೆ ಹೊರತು ಇಬ್ಬರಲ್ಲೂ ಅದರ ನಿರೀಕ್ಷೆಯಾಗಲಿ, ಅದರ ಸಂಭ್ರಮವಾಗಲಿ ಇರಲಿಲ್ಲ. ಬರೀ

ನಿರ್ಲಿಪ್ತ, ನಿರ್ವಿಕಾರ ಮನೋಭಾವ ಜೀವನವಿಡೀ ಒಂದಾಗಿರಲು ಹೊರಟಂತಿತ್ತು. ಭರತ್ ರಘುವಿನೊಡನೆ ಮಾತಾಡಿರಬಹುದೆ ಎಂದು ಕೆಲವೊಮ್ಮೆ ಅನ್ನಿಸುತ್ತಿತ್ತು. ಹಾಗೆಯೇ ಆಯ್ತು. ಒಂದು ದಿನ ರಘು ಬಂದವನೆ "ನಿನ್ನೊಡನೆ ಮಾತಾಡ್ಬೇಕು. ಮತ್ತೆ ನಂಗೆ ಸತ್ಯ ತಿಳೀಬೇಕು. ನೀನು ಸತ್ಯನೇ ಹೇಳ್ತಿಯಾಂತ ನಂಬಿದ್ದೀನಿ......." ಎಂದಾಗ ಯಾವುದೇ ಅಳುಕಿಲ್ಲದೆ ಮಾತಿಗೆ ತೊಡಗಿದಳು. "ನಾನು ಹಳ್ಳಿಗೆ ಹೋದ ದಿನ ನಡೆದದ್ದೆಲ್ಲಾ ಭರತ್ ತಿಳಿಸಿದ. ಆವತ್ತು ನಡೆದದ್ದು ನಿಜಾನಾ........?" "ಹೌದು ನಿಜ" "ನಾನು ಬರೋಲ್ಲಾಂತ ಗೊತ್ತಾದ್ಮೇಲೆ ಹಾಸ್ಟೆಲ್ಲಿಗೆ ಹೋಗ್ಬಹುದಿತ್ತಲ್ಲಾ....." "ನಾನು ಬಂದೇಬರ್ತೀನಿ ಏಷ್ಟೊತ್ತಾದ್ರೂ ನೀನ್ಲ ಕಾಯ್ತಿರು....... ಅಂತ ಹೇಳಿಹೋದೋನು ನೀನೇತಾನೆ?" ಮೊನಚಾಗಿತ್ತು ಸ್ವರ. ಅರೆಕ್ಷಣ ಮೌನದ ನಂತರ ತಡವರಿಸುತ್ತ ಬಂದವು ಮಾತುಗಳು "ಅವನ್ಜೊತೆ ಸಹಕರಿಸಿದ್ಯಂತೆ...." "ಹೌದು. ಯಾಕಂದ್ರೆ ನಂಗೆ ಬೇರೆ ದಾರಿ ಇರ್ಲಿಲ್ಲ. ನಾನು ಸಹಕರಿಸ್ದೆ ಇದ್ದಿದ್ರೂ ನನ್ನೇನು ಅವ್ನು ಬಿಡ್ತಿರ್ಲಿಲ್ಲ." "ಅರೆ! ಎಷ್ಟು ಕೂಲಾಗಿ ಹೇಳ್ತಿಯಲ್ಲಾ.......? ಬಿಡ್ದೆ ಇದ್ರೆ ಹೋರಾಡ್ಬೇಕಿತ್ತು. ಶೀಲ ಕಾಪಾಡ್ಕೊಳ್ಳೋಕೆ ಪ್ರಾಣಾನೇ ತೆಗೀತಾರೆ; ಪ್ರಾಣಾನೇ ಕೊಡ್ತಾರೆ. ಅಂತದ್ರಲ್ಲಿ..... ನೀನು ವಿಚಿತ್ರವಾಗಿ ಮಾತಾಡ್ತಿಯೇ......?" "ವಿಚಿತ್ರ ಏನಿಲ್ಲ. ನಾನು ಹೋರಾಡಿದಷ್ಟೂ ಅವ್ನು ಬಲವಾಗ್ತಿದ್ದ; ಅವನಾಸೆ ಹೆಚ್ಚಾಗ್ತಿತ್ತು. ಅಲ್ದೆ ಅವ್ನ ಪ್ರಾಣ ತಗೀಯೋಷ್ಟು ಶಕ್ತಿ ನನಗಿಲ್ಲ. ಮತ್ತೆ ಇಂತಹ ಕ್ಷುಲ್ಲಕ ವಿಚಾರಕ್ಕೆ ಪ್ರಾಣ ತಕ್ಕೊಳಷ್ಟು ಮೂರ್ಖಳಲ್ಲ ನಾನು......" ತಣ್ಣಗಿತ್ತು ಸ್ವರ. ಆದರೆ ಅವ್ನು ಆವೇಶಗೊಂಡಿದ್ದ. "ಹೌದೌದು, ನೀನು ಮೂರ್ಖಳಲ್ಲ. ಆದ್ರೆ ನನ್ನ ಮೂರ್ಖನ್ಮಾಡ್ದೆ. ದಿಸಿಸ್ ನಾಟ್ ಎ ರೇಪ್....... ಅಂಡರ್‌ಸ್ಟ್ಯಾಂಡಿಂಗ್ ಮೇಲೇ ಆಗಿರೋದು. ಸೊ, ಯು ವಾಂಟೆಟ್ ದಿಸ್...... ಯು ವಾಂಟೆಡ್....." "ಇಲ್ಲ ರಘು ಇಲ್ಲ...." ವಿಷಾದವಿತ್ತು ಮಾತಿನಲ್ಲಿ. "ಅದನ್ನ ನಾನು ಒಪ್ಕೊಂಡೆ ಅಂದಾಕ್ಷಣ ಅದು ನಂಗೇ ಬೇಕಾಗಿತ್ತು ಅನ್ನೋದು ತಪ್ಪು. ಕೇವಲ ಹಿಂಸೆಯಿಂದ ಮುಕ್ತಳಾಗೋಕೆ ಒಪ್ಕೊಂಡಿದ್ದು ಹೌದು. ಆದರೆ ಏನೇ ತಲೆಕೆಳಗಾಗಿದ್ರೂ ಆ ದಿನ ಅಲ್ಲಿಂದ ತಪ್ಪಿಸ್ಕೊಳ್ಳೋಕ್ಕೆ ಸಾಧ್ಯವೇ ಇರ್ಲಿಲ್ಲ ಅನ್ನೋದು ಕಟುಸತ್ಯ. ನಂಗೆ ಈಗ್ಲೂ ಒಂದೊಂದ್ಸಾರಿ ಅನ್ನುತ್ತೆ ಅವ್ನು ಹ್ಯಾಗೋ ನಾನೊಬ್ಳೆ ಇರೋದು ಪತ್ತೆ ಮಾಡಿದ್ದಾನೇಂತ......." ಈ ಮಾತು ಕೇಳಿದ್ದೆ ಆವೇಶವೆಲ್ಲಾ ಜರ್ರನಿಳಿಯಿತು. ಆದರೂ ಬಿಡಲಿಲ್ಲ. "ಹೋಗ್ಲಿ ಬಿಡು ಅದೆಲ್ಲ ಸರಿ....... ಆದ್ರೆ ನನ್ನತ್ರ ಮುಚ್ಚಿಟ್ಟದ್ದಕ್ಕೇನು ಕಾರಣ?" "ಏನೂ ಕಾರಣವಿಲ್ಲ. ನಮ್ಮಿಬ್ಬರ ಮನಸ್ಸೇ ಒಂದಾಗಿರೋವಾಗ ಈ ಕ್ಷಣಿಕವಾದ್ದಕ್ಕೆ ನೀನೇನು ಮಹತ್ವ ಕೊಡೋಲ್ಲ ಅಂದ್ಕೊಂಡೆ. ರಘು, ನಿನ್ನ ವೇನಲ್ಲೇ ಹೋದ್ರೂ....... ತಪ್ಪಿಸ್ಕೊಳ್ಳೋಕೆ ಆಗ್ದೆ ಇದ್ದದ್ದನ್ನ ಒಪ್ಪಿಕೊಂಡದ್ದಕ್ಕೆ ನಾನೇ ಹೊಣೆ ಅಂತಾದ್ರೆ....... ಅವ್ನ ಗುಣ ತಿಳ್ದೂ ಅವ್ನ ನೋಟ ನನ್ನ ಅಳೀತಿದ್ದು ಗೊತ್ತಿದ್ದೂ, ಅವ್ನನ್ನ ನನ್ನ ಹಿಂದೆಮುಂದೆ ಕರ್ಕೊಂಡು ಓಡಾಡಿ ಆ ತಪ್ಪಿಸ್ಕೊಳ್ಳೋಕೆ ಆಗ್ದೆ ಇದ್ದಂತ ಅಥ್ವಾ ನಾನು

ಒಪ್ಕೊಳ್ಳೋ ಅಂತ ಸನ್ನಿವೇಶ ಸೃಷ್ಟಿಯಾಗೋಕೆ ನೀನೂ ನನ್ನಷ್ಟೆ ಹೊಣೆ ಅಂತ ಅನ್ನಿಸೋಲ್ವಾ.......?" ನೇರವಾದ ಪ್ರಶ್ನೆಗೆ ಮುಖದಲ್ಲಿ ಬೆವರೊಡೆದರೂ ಅದನ್ನ ಒರೆಸುತ್ತಾ "ಇಲ್ಲಾ......" ಎಂದು ಮಾತು ಮುಗಿಸಿಬಿಟ್ಟ.

ರಘುವಿಗಿಂದು ಸಂಭ್ರಮವೋ ಸಂಭ್ರಮ. ಕೂತಲ್ಲಿ, ನಿಂತಲ್ಲಿ ಕನಸು....... ಬರೀ ಕನಸು....... ಸುಖದ ಕನಸು. ಈ ದಿನ ಪ್ರಥಮ ರಾತ್ರಿಯ ಶುಭದಿನ. ಆರತಿಯೆಲ್ಲಾ ಅದೇತಾನೇ ಮುಗಿದು ಇನ್ನೇನು ಸಜ್ಜೆ ಮನೆಗೆ ಹೊರಡುವವನಿದ್ದ ಹೊರಬಾಗಿಲಲ್ಲಿ ಪ್ರತ್ಯಕ್ಷನಾದ ಭರತ್ "ಕಂಗ್ರಾಚ್ಯುಲೇಷನ್ಸ್ ರಘೂ! ಸ್ಸಾರಿ ಮದ್ವೆ ದಿವ್ಸ ಬರೋಕಾಗ್ಲಿಲ್ಲ......" "ಪರ್ವಾಗಿಲ್ಲ ಬಿಡು, ನೀನ್ ಬರೋಲ್ಲಾಂತ ನಂಗೂ ಗೊತ್ತಿತ್ತು. ಸದ್ಯ ಇವತ್ತಾದ್ರೂ ಬಂದ್ಯಲ್ಲ ಬಾ ಊಟ ಮಾಡ್ಬಾ....." ಅವ್ನ ಹೆಗಲ ಸುತ್ತ ಕೈಯ್ಯಾಕಿ ಅವನನ್ನ ಒಳಗೆ ಕರೆದೊಯ್ದು ಇಬ್ಬರೇ ಕೂತಾಗ ಭರತ್ ಕಾರ್ಡ್ ಒಂದು ತೆಗೆದುಕೊಟ್ಟ. ಬಲು ಆಶ್ಚರ್ಯದಿಂದ ಉದ್ಗಾರ ತೆಗೆದ ರಘು "ಯಾರ್ದೊ ಮದ್ವೇ......? ನಿಂದಾ.......?" ಇಡೀ ಮನೆಯೊಮ್ಮೆ ಗಿರ್ರನೆ ಸುತ್ತಿ ನಿಂತಂತಾಯ್ತು ಒಳಗೆ 'ಭರತ್ ವಿತ್ ಮೈತ್ರ' ಎಂದಿದ್ದದ್ದು ಕಂಡು. "ನಂಗೊತ್ತೋ ರಘು ನಿಂಗೆ ತುಂಬಾ ಶಾಕ್ ಆಗುತ್ತೇಂತ. ಅದೇನೋ ಏನೋ ಆ ದಿನ ಅವ್ಳು ಹೋರಾಡಿದ್ದು...... ಹೆದರಿದ್ದು....... ಕಡೆಗೆ ನನಗೆ ತನ್ನನ್ನ ಒಪ್ಪಿಸ್ಕೊಳ್ತಾಹೋಗಿದ್ದು...... ಇದೆಲ್ಲಾ ನನಗೆ ತೀರಾ ಹೊಸ್ದು. ಅವ್ಳು ನನ್ನ ಒಪ್ಕೊಳ್ತಿದ್ದಾಳೆ ಅನ್ನೋ ಭಾವನೇನೆ ನಂಗೆ ಸುಖ ಕೊಡ್ತಿತ್ತು. ಮೈತ್ರ ನನ್ನ ಎಷ್ಟು ಬದಲಾಯಿಸಿದ್ಲು ಅಂದ್ರೆ ಆಮೇಲಿನಿಂದ ಅವ್ಳನ್ನ ಮರೆಯೋಕೇ ಆಗ್ಲಿಲ್ಲ ನಂಗೆ. ಅವ್ಳ ಸ್ನೇಹ ಗಳಿಸ್ಬೇಕು. ಅವ್ಳ ಜೊತೇಲಿ ಮಾತಾಡ್ಬೇಕು...... ಅವ್ಳಿಗೆ ಹತ್ತಿರ ದೋನಾಗ್ಬೇಕು ಅನ್ನೋ ಆಸೆ ದಿನೇದಿನೇ ಹೆಚ್ಚಾಗ್ತಿತ್ತು. ಸತ್ಯವಾಗ್ಲು ರಘು, ಮೈತ್ರ ನನ್ನೊಳಗೆ ಸದಾ ನೆಲಸಿದ್ದ ಅಭಾವ, ಬೇಕುಬೇಕನ್ನೊ ಹಾಹಾಕಾರನ ಪೂರ್ತಿಯಾಗಿ ಅಡಗ್ಸಿಬಿಟ್ಲು ಅನ್ಸುತ್ತೆ; ನೌ ಐ ಫೀಲ್ ದಟ್....... ಐ ಯಾಂ ಫುಲ್ ವಿತಿನ್ ಮಿ....... ಅದಾದ್ಮೇಲೆ ಬೇರೆ ಹೆಣ್ಣು ಬೇಕನ್ನಿಲ್ಲ. ನನ್ನ ಇದುವರೆಗಿನ ಜೀವ್ನದ ಪ್ರತಿಯೊಂದು ಕ್ಷಣವನ್ನೂ ಆಕೆಗೆ ತಿಳಿಸಿದ್ದೀನಿ. ನನಗೆ ನಿನ್ ಮನ್ಸು, ನಿನ್ ಪ್ರೀತಿ ಮುಖ್ಯಾಂದ್ಲು. ಏನೋ ಒಂದು ಅಂಡರ್‌ಸ್ಟ್ಯಾಂಡಿಂಗ್ ಮೇಲೆ ಹೊಸಜೀವನ ನಡೆಸೋಕೆ ಇಬ್ರೂ ರಾಜಿಯಾಗಿದ್ದೀವಿ...... ಪ್ಲೀಸ್ ವಿಶ್ ಅಸ್ ಯಾರ್....... ನಮ್ಗೆ ಒಳ್ಳೆದಾಗ್ಲಿ, ಕೊನೇವರ್ಗೂ ಜೊತೆಯಾಗಿರ್ಲೀಂತ ಹಾರೈಸೋ......" ರಘುವಿನ ಬಾಯಿಂದ ಮಾತೇ ಹೊರಡ್ಲಿಲ್ಲ. ಭರತ್ ಪಕ್ಕನೆ ಏನೋ ನೆನಪು ಮಾಡಿಕೊಂಡು ಹೇಳಿದ "ಒಂದೇ ಒಂದ್ವಿಷ್ಯ ಮುಚ್ಚಿಟ್ಟೆ ಅವ್ಳತ್ರ ಏನ್ಗೊತ್ತಾ.......? ಅದೇ ಆ ದಿನ ನೀನು ಹಳ್ಳಿಗೆ ಹೋಗೋ ಮುಂಚೆ ನನಗ್ಬಂದು ಮೈತ್ರ ಮನೇಲಿ ಒಬ್ಳೆ ಇರ್ತಾಳೆ, ನಾನ್ ಊರಿಗೋಗ್ತಿದ್ದೀನಿ ಅಂತ ಹೇಳಿಹೋಗಿದ್ದು. ಈ ಸತ್ಯಾನ ಅರಗಿಸ್ಕೊಳ್ಳೋಕೆ ಅವ್ಳಿಂದ ಆಗ್ಲಾರ್ದೂಂತ ಬೇಕಂತ ಹೇಳ್ಲಿಲ್ಲ.

ಹೋಗ್ಲಿಬಿಡೋ, ಹಿಂದಿಂದೆಲ್ಲಾ ಯಾಕೆ. ಆದ್ರೂ ನಿನ್ನೀ ಉಪಕಾರನ ಸಾಯೋತ ನಕ ಮರೆಯೋಲ್ಲ......"

ಆದರೆ ರಘು ಮರೆತ. ಪ್ರಥಮ ರಾತ್ರಿ, ಹರೆಯದ ಹೆಣ್ಣು, ಬೆಚ್ಚನೆಯ ಕೋಣೆ, ಮೆತ್ತನೆಯ ಹಾಸಿಗೆ, ಹೂಗಳ ಸರಮಾಲೆ....... ಎಲ್ಲವನ್ನೂ ಮರೆತು ಭರತಾಡಿದ ಮಾತುಗಳಲ್ಲಿ ಸಿಕ್ಕಿ ಅದರ ಗುಂಗಿನಲ್ಲೇ ಮುಳುಗಿಹೋದ.

* * *

# ಕಳ್ಳುಬಳ್ಳಿ

ಕೆಂಚನಿಗೆ ಕಣ್ಣು ಎಳೆಯುತ್ತಿದ್ದವು. ಗಂಟೆ ಆಗಲೇ ಹತ್ತಾಗಿತ್ತು. ಆದರೂ ಉಣ್ಣುವವರಿನ್ನೂ ಇದ್ದರು. ಎಲ್ಲರೂ ಉಂಡ ಮೇಲೆ ಪಾತ್ರೆಗಳನ್ನೆಲ್ಲ ಬೆಳಗಿ, ನೆಲ ಗುಡಿಸಿ ಒರೆಸಿ ಮಗ ತಿಪ್ಪ ನೆಲ ಕಾಣುವ ಹೊತ್ತಿಗೆ ಹನ್ನೊಂದಾದರೂ ಆಯ್ತು ಹನ್ನೆರಡಾದರೂ ಆಯ್ತು. ಹತ್ತು ವರ್ಷದ ತಿಪ್ಪ ಬೆಳಗ್ಗಿನಿಂದ ಈ ಮನೆಯ ಕೆಲಸ ಮಾಡಿ, ಮಾಡಿ ಸೋತು ಸುಣ್ಣ ಆಗಿದ್ದ. ಈ ಮನೆಯ ಯಜಮಾನರು ಶಿವಣ್ಣ ಮತ್ತು ಇಂದ್ರ. ನಾಳೆಯೇ ಅವರ ಒಬ್ಬನೇ ಮಗ ರಾಜುವಿನ ಹನ್ನೆರಡನೇ ವರ್ಷದ ಹುಟ್ಟುಹಬ್ಬ. ಇಂದೇ ಬಂಧುಬಳಗವೆಲ್ಲ ಬಂದಿಳಿದಿತ್ತು. ಅವರುಗಳೆಲ್ಲ ಉಂಡು ಮುಗಿಸುವ ತನಕ ತಿಪ್ಪನ ಹೊಟ್ಟೆಯೂ ಖಾಲಿ.

ಹೆಂಡತಿ ಬಸ್ವಿಯು ಬಳಿ ತಿಪ್ಪನನ್ನು ಕರೆತರುವೆ ಉಗಾದಿ ಹಬ್ಬಕ್ಕೆ ಎಂದು ಹೇಳಿಬಂದಿದ್ದ. ಆದರೆ ಶಿವಣ್ಣನ ಮನೆಗೆ ಬಂದಾಗ ಆ ವಿಷಯ ಮಾತಾಡಲೇ ಇಲ್ಲ. ಬದಲಿಗೆ ದುಡ್ಡಿಗಾಗಿ ಬಂದಿದ್ದೆ ಎಂದಿದ್ದ. ತಿಪ್ಪನನ್ನು ಊರಿಗೆ ಕರೆದು ಕೊಂಡು ಹೋಗಬಾರದೆಂದೇನೂ ಇರಲಿಲ್ಲ ಅವನಿಗೆ. ಆದರೆ ಮಗನನ್ನು ನೋಡಿ ಬಸ್ವಿ ಮತ್ತೆಲ್ಲಾದರು ಮನಸ್ಸನ್ನ ಬದಲಾಯಿಸಿ, ರಂಪ ತೆಗೆದು ಗಲಾಟೆ ಮಾಡಿದರೆ ಎಲ್ಲೀ ಸಹವಾಸ ಅಂತ ಆ ವಿಚಾರವನ್ನೇ ಕೈಬಿಟ್ಟಿದ್ದ. ಸಾಮಾನ್ಯವಾಗಿ ಅವನು ಶಿವಣ್ಣನ ಮನೆಯ ಬಳಿಗೆ ಬರುತ್ತಿರಲಿಲ್ಲ. ಆಫೀಸಿನ ಬಳಿಯೇ ಹೋಗಿಬರುತ್ತಿದ್ದ. ಆದರೆ ಇಂದು ರಜವಿದ್ದುದರಿಂದ ಮನೆಗೆ ಬಂದಿದ್ದ. ಇಲ್ಲಿ ಮಗನ ದುಡಿತದ ಅಂದಾಜು ಈಗವನಿಗೆ ಅರಿವಾಗಿತ್ತು. ಒಳಗೊಳಗೇ ಸಂಕಟವೂ ಆಯ್ತು.

ಕೆಂಚನಿಗೆ ನಾಲ್ಕು ಮಕ್ಕಳು. ಎಲ್ಲಿ, ಮಲ್ಲಿ, ಕೆಂಚಿ, ತಿಪ್ಪ. ತಿಪ್ಪನೇ ಕಿರಿಯುವನು. ಅಂತೆಯೇ ಅವ್ವನ ಕಣ್ಮಣಿ. ಕಿರಿಮಗಳು ಕೆಂಚಿಯೊಬ್ಬಳೆ ಉಳಿದು ಇನ್ನಿಬ್ಬರು ಹಿರಿಯರಿಗೆ ಮದ್ವೆಯಾಗಿತ್ತು. ಕೈಯಲ್ಲಿ ಬಿಡಿಗಾಸು ಇರಲಿಲ್ಲವಾದ್ದರಿಂದ ಮುಂದಿನ ವರ್ಷಕ್ಕೆ ಅವಳ ಮದುವೆ. ಹುಡುಗನೂ ಗೊತ್ತಾಗಿದ್ದ. ಆದರೆ ಅಪ್ಪರೊಳಗೆ ಬೆಳಗ್ಗೆ ಚೆಂಬು ತೆಗೆದುಕೊಂಡು ಹೋದಾಗ, ಮಧ್ಯಾಹ್ನ ಅಪ್ಪಯ್ಯ ನಿಗೆ ಬುತ್ತಿ ಒಯ್ವಾಗ ಬಂಡೆ ಅಡಿಯಲ್ಲೊ, ಬಣವೆ ಮರೆಯಲ್ಲೊ ಕೆಂಚಿ, ಅವಳ ಭಾವಿಗಂಡ ಕೂಡಿ ಮಾಡಿದ ಪ್ರೀತಿಯ ಕಾವಿಗೆ ಕೆಂಚಿ ಕಕ್ಕಿಕೊಳ್ಳತೊಡಗಿದ್ದಳು. ಆ ಕ್ಷಣವೇ ಮದುವೆ ಮುಗಿಸಬೇಕಿತ್ತು. ಎಲ್ಲೂ ದುಡ್ಡು ಸಿಗದಿದ್ದಾಗ ಆ ಊರಿನ ಲಿಂಗಾಯತರ ರಾಮಣ್ಣನ ಸಲಹೆಯಂತೆ, ಸ್ಕೂಲಿಗೆ ಹೋಗುತ್ತಿದ್ದ ತಿಪ್ಪನನ್ನು ಅವರ ಮನೆಯಲ್ಲಿ ಇಟ್ಟು, ದುಡ್ಡು ಇಸಿದುಕೊಂಡು ಬಂದಿದ್ದ ಕೆಂಚ. ತನ್ನ ಕರುಳನ್ನು ಬಗೆದು ಒಯ್ಯುತ್ತಿರುವರೇನೋ ಎಂಬಂತೆ ಗೋಳಾಡಿದ್ದಳು ಬಸ್ವಿ. "ನಮ್ ಪಡಿಪಾಟ್ಲು, ನಮ್ ಬವಣೆ ಆ ಮಗಿಗೆ ಬ್ಯಾಡ ಅಂತ ಇಸ್ಕೂಲಿಗಾ ಕಿದ್ರೆ..... ಇವತ್ತು ಅದಕ್ಕೂ ಕಲ್ಲು ಬಿತ್ತು. ನನ್ಮಗನಿಗೂ ಕಂಡೋರ್ಮನೆ ಚಾಕರೀನೆ ಗತಿಯಾಯ್ತಲ್ಲಾ....." ಅಂತ ಬಡಬಡಿಸಿದ್ದಳು. ಹೇಗೋ ಆರುತಿಂಗಳು ಕಾಲ ಹಾಕುವ ಹೊತ್ತಿಗೆ ಸಾಕುಸಾಕಾಯ್ತು. ಅಳುತ್ತ ಕರೆಯುತ್ತ, ಉಪವಾಸ ವನವಾಸ ಮಾಡಿ ನೆಲ ಕಚ್ಚಿ ಮಲಗಿಬಿಟ್ಟಳು ಆಕೆ. ಮೊಮ್ಮಕ್ಕಳನ್ನ ಕಂಡಿದ್ದರೂ ಇನ್ನೂ ಗಟ್ಟಿಮುಟ್ಟಾಗಿ, ಬಿರುಸಾಗಿದ್ದ ಬಸ್ವಿ, ನಾಲ್ಕಾಳು ಕೆಲಸವನ್ನು ಒಬ್ಬಳೇ ಮಾಡಿ ಬಿಸಾಕುವಂತಹ ಹೆಣ್ಣು. ಆಕೆ ಮೇಲೇಳದ ಹಾಗೆ ಮಲಗಿದಾಗ ಕೆಂಚ ನಿಜಕ್ಕೂ ಹೆದರಿದ. ಕೆಂಚನಿಗೆ ಅವಳೆಂದರೆ ಒಂಥರ ಭಯ, ಸಿಟ್ಟು. ಒಂಥರ ಪ್ರೀತಿ ಎಲ್ಲವೂ ಇತ್ತು. ಅವಳ ಜೊತೆಯಿಲ್ಲದೆ ಅವನಿಂದ ಏನೊಂದು ಕೆಲಸವೂ ಸಾಧ್ಯವೇ ಇರಲಿಲ್ಲ. ಇದು ಅವನಿಗೂ ತಿಳಿದಿತ್ತು. ಆದ್ದರಿಂದ ಆಕೇನ ಹೆಚ್ಚು ತಡವುತ್ತಿರ ಲಿಲ್ಲ. ಆದರೀಗ ಪೂರ್ತಿ ಹೆದರಿದ. ಎದ್ದೆನೋ ಬಿದ್ದೆನೋ ಅಂತ ತನ್ನ ಹಿರಿ ಮಗಳು ರತ್ನಿಯ ಊರಿಗೆ ಓಡಿದ. ಅಳಿಯ ವಿರೇಶಿ ಮುನ್ಸಿಪಾಲಿಟಿ ಕ್ಲೀನರ್ರೂ. ಕೆಲಸ ಸಿಕ್ಕು ಎರಡು ವರ್ಷಗಳಾಗಿದ್ದವು. ಆ ಮೊದಲು ಈರೇಸಿ ಆಗಿದ್ದೋನು ಕೆಲಸ ಸಿಕ್ಕನಂತರ ವಿರೇಶಿ ಆಗಿದ್ದ. ಮಗಳು ಅಳಿಯನ ಎದುರಿಗೆ ತನ್ನ ಕಷ್ಟ ಹೇಳಿಕೊಂಡ ಕೆಂಚ "ಏನನ ಮಾಡ್ರಪ್ಪ...... ಬಸ್ವಿ ನೆಲ ಹಿಡ್ದು ಮಲ್ಗಿದ್ರೆ ನನ್ ಕೈಕಾಲು ಬಿದ್ದೋದಂಗೆಯ....." ಅಂದ. "ಸುಮ್ಕೆ ನಾನೇಳ್ದಂಗೆ ಮಾಡ್ಮಾವ. ಎಲ್ಲಾನ ಒಂದೈನೂರು ಜೋಡಿಸ್ಕಂಡು ವೋಗಿ ಮಗನ್ನ ಕರ್ಕಂಡ್ಬಾ. ಯಂಗೂ ಆರ್ತಿಂಗ್ಳು ಆಗೋಗೈತೆ. ಇನ್ನಾರ್ತಿಂಗ್ಳಿಗೆ ಐನೂರು ಸರಿವೋಗೈತೆ......" ಅಂತ ಸಲಹೆ ಕೊಟ್ಟ ವಿರೇಶಿ, "ಅಯ್ಯೋ ನನ್ತಾವೆಲ್ಲದೋ ವಿರೇಸಿ ಆಟೊಂದುಡ್ದು...... ನಾನೆಲ್ಲಿಂದ ವೊಂದ್ಸಾನೇಳು..... ?" ಕೆಂಚ ಗೋಳಾಡಿ, ಕಾಡಿಬೇಡಿದಾಗ ವಿರೇಶಿ ಒಂದಿನ ತಡೆದು ಮಾವನ ಕೈಗೆ ಐನೂರು ಕೊಟ್ಟು ಹೇಳಿದ, "ನೋಡ್ಮಾವ ಯೇನೋ ಸ್ನೇಹಿತ ಅಂತ ಹುಸೇನಣ್ಣ ಮೂರ್ತಿಂಗ್ಳು ಗಡುವು ಯೇಳಿ ಬಡ್ಡಿಯಿ ಲ್ಲಂಗೆ ದುಡ್ಡು ಕೊಟ್ಟವ್ನೆ....... ಆಟ್ರೊಳ್ಗೆ ನೀನೇನ ದುಡ್ಡು ವೊಂದಿಸ್ಲಿಲ್ಲಾಂದ್ರೆ

ನೂರಕ್ಕೆ ಹತ್ತರಂಗೆ ಬಡ್ಡಿಯಾಗೈತೆ ನೋಡ್ಕತ್ತೆ......" "ಇಲ್ಲಪ್ಪ ಆಟೋತ್ತಿಗೆ ಯಂಗಾನ ಮಾಡಿ ನಾನೆಲ್ಲ ವೊಂದುಸ್ತೀನಿ....." ಅಂತ ಹೇಳಿ ಊರಕಡೆಗೆ ಓಟಕಿತ್ತಿದ್ದ ಕೆಂಚ. ಅವನಿಗೆ ಕೊನೆಗೂ ತಿಳೀಲಿಲ್ಲ ಐನೂರು ವಿರೇಶಿಯ ಅಣ್ಣ ಮಾರಪ್ಪ ಕೊಟ್ಟಿದ್ದು ಅಂತ. ತನ್ನದು ಅಂತ ಹೇಳಿದರೆ ದುಡ್ಡು ವಾಪಸ್ಸು ಬರುತ್ತೊ ಇಲ್ಲವೋ ಎಂದು ಮಾರಪ್ಪನೆ ವಿರೇಶಿ ಕೈಲಿ ಹಾಗೇ ಹೇಳಿಸಿದ್ದ. ಅದಕ್ಕೆ ರತ್ನಿಯೂ ಸಮ್ಮತಿಸಿದ್ದಳು.

ಕೆಂಚ ತಿಪ್ಗನ್ನ ಕರೆದುಕೊಂಡು ಬಂದ ದಿನ ನೋಡಬೇಕಿತ್ತು ತಾಯಿ ಮಗನ ಖುಷಿ, ಆನಂದವನ್ನ. "ಅವ್ವಾ......" ಅಂತ ಓಡಿಬಂದ ಮಗನನ್ನ "ತಿಪ್ಗಾ ಬಂದ್ಯಾ ಸಾಮಿ...." ಎಂದು ಎದೆಗೆ ಅವಚಿಕೊಂಡು, ಮುಖದ ತುಂಬಾ ಮುತ್ತು ಸುರಿಸಿದ್ದಳು ಬಸ್ವಿ. ಅವಳ ಅಪ್ಪುಗೆಯಲ್ಲಿ ಕರಗಿ, ಅವಳೆದೆಯಲ್ಲಿ ಮುಖವುದು ಗಿಸಿದ್ದ ತಿಪ್ಗ. ಹಿಂದಿನ ನೆನಪಿನಲ್ಲಿ ಎಲ್ಲೊ ತೇಲಿಹೋಗಿದ್ದ ಕೆಂಚನನ್ನು ಶಿವಣ್ಣನ ದನಿ ಎಚ್ಚರಿಸಿತು. "ಹೋಗಯ್ಯ ನೀನೆದ್ದು ಹೋಗಿ ಮಲ್ಕೊಹೋಗು...... ಇಲ್ಲಿ ಕುಂತ್ಗಂಡು ಏನ್ಮಾಡ್ತಿದ್ದಿ.......? ನಾನು ಮಧ್ಯಾಹ್ನವೇ ನಿನಗೆ ಹೇಳಿದ್ದೀನಿ ಈಗ ನನ್ನತ್ರ ದುಡ್ಡಿಲ್ಲ ಅಂತ....." "ಅಂಗಂದ್ರೆಂಗಣ್ಣಾ.......? ವೋಗ್ಲಿ ಐನೂರಿಲ್ದಿದ್ರೋಟಿವೋತು ಒಂದಿನ್ನೂರಾನ ಕೊಡು....." ತಲೆಕೆರೆಯುತ್ತಾ ಕೇಳಿದ ಕೆಂಚ. "ಏನೂ......? ಮಾತ್ಮಾತಿಗೂ ದುಡ್ಡು, ದುಡ್ಡು ಅಂತೀರಲ್ಲ ನಾನೇನಿಲ್ಲಿ ದುಡ್ಡಿನ್ಮರಗಿರ ಹಾಕಿದ್ದೀನಿ ಅಂದ್ಕಂಡಿದ್ದಿರೇನೊ.....?" ಕೆರಳಿದ ಶಿವಣ್ಣ. "ಅಂಗಲ್ಲಣ್ಣಾ......" ಅಂದ ಕೆಂಚನನ್ನು ಅರ್ಧಕ್ಕೆ ತಡೆದು "ನೋಡು ಕೆಂಚ ಹಂಗೂ ಇಲ್ಲ ಯಂಗೂ ಇಲ್ಲ. ಈಗ ಇಲ್ಲಾಂದ್ರೆ ಇಲ್ಲ ಅಷ್ಟೆ. ಆ ಹುಡುಗನ್ನ ಕರ್ಕಂಡು ಬಂದ ದಿನವೇ ಒಂದು ಸಾವಿರ ಇಸ್ಕಂಡೋದ್ರಿ ನೀವು. ಮತ್ತೆ ಆಫೀಸಿನತ್ರ ಒಂದಿನ ಬಂದು ಮುನ್ನೂರು ಇಸ್ಕಂಡಿದ್ದೀಯ...... ಮತ್ತೆ ಕೊಡು ಅಂದ್ರೆ ಹೆಂಗೆ.....? ಇನ್ನೇನಿದ್ರೂ ಈ ವರ್ಷದ ಕೊನೆಗೆ ಅಲ್ಲೀವರ್ಗೂ ಏನೂ ಇಲ್ಲ......" ಅಷ್ಟೇಳಿ ಶಿವಣ್ಣ ತನ್ನ ಕೋಣೆಯತ್ತ ಹೊರಟ, ಯಾಕೋ ತಾನು ಬಂದ ಕೆಲಸ ಎಡವಟ್ಟಾಗಿ ಕಾಣಿಸ್ತು ಕೆಂಚನಿಗೆ. "ಯಂತಾ ಕೆಲ್ಸ ಆತಲ್ಲ...... ಆ ವುಡ್ಗನ್ನಾರ ಊರಿಗೆ ಕರ್ಕಂಡೋಗ್ಬಹುದಿತ್ತು......" ಕೆಂಚ ಒಬ್ಬನೆ ಒದ್ದಾಡಿಕೊಂಡ. ಅಡುಗೆ ಮನೆಯಲ್ಲಿ ನಿದ್ದೆ ಮೆತ್ತಿದಂತಿದ್ದ ಕಣ್ಣುಗಳ ರೆಪ್ಪೆಯನ್ನು ತೆರೆಯಲಾರದೆ ತೆರೆಯುತ್ತ ಕಸಗುಡಿಸುತ್ತಿದ್ದ ತಿಪ್ಗನನ್ನೆ ನೋಡಿದ. ಹುಡುಗ ಬಹಳ ಸೊರಗಿದ್ದ. ಕಣ್ಣು, ಗಲ್ಲ ಎಲ್ಲಾ ಒಳಕ್ಕೋಗಿ, ಗುಳಿ ಬಿದ್ದಿದ್ದವು. ಹೇಗೋ ಆಡಿಕೊಂಡು ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದ ಅವನು. ರಾಮಣ್ಣನ ಮನೇಲಿ ಬಿಡೋ ಕ್ಮುಂಚೆ, ಬಿಡಿಸಿದ್ದೆ ಬಂತು ಆಮೇಲೆ ಅತ್ತ ಕಡೆ ತಲೆಹಾಕಲಿಲ್ಲ. ಅವನು ಆನಂತರ ಹಳ್ಳಿಯಲ್ಲಿ ಇದ್ದಿದ್ದಾದರೂ ಕೇವಲ ಮೂರು ತಿಂಗಳು ಅಷ್ಟೆ. ಕೆಂಚನಿಗೆ ಬಸ್ವಿಯ ಮಾತುಗಳು ನೆನಪಾದವು. "ನನ್ ಮಗಿನ ಮತ್ತೆ ದೂರ ಮಾಡ್ಬಿಟ್ಯಲ್ಲಾ......? ನಿನಗೆಂಗೆ ಅರಿವಾದೀತೇಳು ನನ್ ವಟ್ಟೆ ಸಂಕ್ಟಾ...... ನೀನೇನ್ ವತ್ಗಂಡನಲ್ಲ;

ಹಡ್ದನಲ್ಲ..." ಎಂದು ಮಗನ ನೆನಪು ಬಂದಾಗಲೆಲ್ಲ ಗೋಳಾಡುತ್ತಿದ್ದಳಾಕೆ. ಆದರೆ ಇದ್ದ ಅಲ್ಪಸ್ವಲ್ಪ ಭೂಮಿಯ ಬಗೆಗಿದ್ದ ಮಮಕಾರ, ಅದಕ್ಕೇ ಬಿತ್ತುವ ಬೀಜ, ಬೆಳೆಯುವುದಕ್ಕೆ ಗೊಬ್ಬರಕ್ಕೆ ದುಡ್ಡಾಗುವುದಲ್ಲ ಎಂಬ ಆಸೆ ಅವನನ್ನು ನಿಷ್ಠೂರನನ್ನ ಮಾಡಿದ್ದವು.

ರಾಮಣ್ಣನ ಮನೆಯಿಂದ ಬಂದಮೇಲೆ ಅವ್ವನ ಆರೈಕೆಯಲ್ಲಿ ತಿಪ್ಪ ಬಲು ಕಳೆಕಳೆಯಾಗಿದ್ದ. ಆಕೆ ಹಟ್ಟಿಯಲ್ಲಿ ಸಾಕಿದ್ದ ಕೋಳಿಗಳನ್ನ ವಾರಕ್ಕೊಂದರಂತೆ ತಿಪ್ಪನಿಗಾಗಿ ಕೊಯ್ದು, ಬಿಸಿಯಾದ ಮುದ್ದೆ ಇಕ್ಕಿದರೆ ಸರಿಯಾಗಿ ಹೊಡೆಯುತ್ತಿದ್ದ ಅವನು. ಬಸ್ವಿಯಾದರೂ ಮಗನಿಗೆ ಬರಿಯ ಉಣ್ಣಿಸುತ್ತ ಸುಮ್ಮನಿರಲಿಲ್ಲ. ರಾಮಣ್ಣ ಮನೆಯಿಂದ ಬಂದೊಡನೆ ಆ ಊರಿನ ಸ್ಕೂಲಿನ ಮೇಷ್ಟರ ಬಳಿಗೆ ಕರೆದೊಯ್ದಿದ್ದಳು. ಆದರೆ ಈ ವರ್ಷ ಮುಗಿಯಲಿ ಎಂದು ಹೇಳಿದ್ದರವರು. ಅಪ್ಪ ಅವ್ವನ ಜೊತೆಯಲ್ಲಿ ಉಂಡಾಡಿಕೊಂಡು ಹೇಗೋ ಮಜವಾಗಿದ್ದ ತಿಪ್ಪ ಅವನ ಅಕ್ಕ ರತ್ನಿ ಊರಿನಿಂದ ಬಂದು ಅಪ್ಪನನ್ನು ಜೊತೆಯಲ್ಲಿ ಊರಿಗೆ ಕರೆದೊಯ್ಯುವ ತನಕ. ಅಲ್ಲಿಂದ ವಾಪಸ್ಸು ಬಂದಾಗ ಅವನು ಸುಮ್ಮನೆ ಬರಲಿಲ್ಲ, ಬದಲಾಗಿದ್ದ. ಹೆಂಗೋ ಇದ್ದ ಚೂರುಪಾರು ಹೊಲದಲ್ಲಿ ಗಂಡಹೆಂಡತಿ, ಮಗನಿಗೆ ಎರಡು ಹೊತ್ತಿನ ಊಟಕ್ಕೆ ಆಗುವಷ್ಟು ಕಾಳುಕಡ್ಡಿ ಬೆಳೆದುಕೊಂಡು ತನ್ನ ಪಾಡಿಗೆ ತಾನು ಕಾಲ ಹಾಕುತ್ತಿದ್ದ. ಆದರೆ ವಿರೇಶಿ, ಅವನ ಅಣ್ಣ ಮಾರಣ್ಣ ಇಬ್ಬರು ಸೇರಿ ಕೆಂಚನ ತಲೆಯನ್ನು ಕೆಡಿಸಿಬಿಟ್ಟಿದ್ದರು. ಮಾರಣ್ಣನ ಆಫೀಸರ್ ಶಿವಣ್ಣ ಕೆಂಚನಿಗೆ ದೂರದ ಸಂಬಂಧಿ. ಅವರ ಮನೆಯಲ್ಲಿ ಕೆಲಸಕ್ಕಾಗಿ ಒಬ್ಬ ಹುಡುಗ ಬೇಕಾಗಿದ್ದು, ಮಾರಣ್ಣನ ಕೈಲಿ ಹೇಳಿದ್ದರು. "ನಮ್ಮ ಪೈಕಿನೆ ಯಾವುದಾದರೂ ಹುಡುಗ ಇದ್ದರೆ ನೋಡು" ಎಂದು. ಮಾರಣ್ಣ ಆ ಮಾತನ್ನ ವಿರೇಶಿ, ರತ್ನಿ ಮುಂದೆ ಹೇಳಿದಾಗ ರತ್ನಿಗೆ ತಕ್ಷಣವೆ ತಿಪ್ಪನ ನೆನಪಾಗಿ "ಸುಮ್ಕೆ ತಿಂದ್ತಿಂದು ತಿರುಗಾ ಬದ್ಲು ಅವರ್ಮನೆಯಾಗೆ ಬಿದ್ದಿರ್ಲೇಳು..... ಕೈಯಾಗ್ನಾಕು ಕಾಸರ ಆಕ್ತಾವೆ....." ಅನ್ನುತ್ತ ಹಿಂದೆಯೇ ಊರಿಗೆ ಹೊರಟುಬಂದು ಅಪ್ಪನ್ನ ಜೊತೆಗೆ ಕರೆದೊಯ್ದಿದ್ದಳು. ಅಣ್ಣತಮ್ಮ ಇಬ್ಬರು ಸೇರಿ ಹೇಳಿದ್ದರು ಕೆಂಚನಿಗೆ "ನೋಡು, ಬಂಗಾರ ಬೆಳಿ ಯಾಂತ ಭೂಮಿ ಐತೆ. ಸುಮ್ಕೆ ಯಾಕೆ ಅನ್ಯಾಯ ಮಾಡ್ಕೆಂತಿಯಾ......? ಶಿವಣ್ಣಗೆ ಬೇಕಾದಂಗೈತೆ. ಹೆಣ್ತಿನೂ ದುಡೀತಾಳೆ. ಇರಾನೊಬ್ಮಗ ಅವ್ರಿಗೆ. ನಿನ್ಮಗ ಅವರ ಮನ್ಯಾಗೆ ಚೂರ್ಪಾರು ಮೇಲಿನ ಕೆಲ್ಸ ಮಾಡ್ಕೊಂಡು ಬಿದ್ದಿದ್ರೆ ಸಾಕು. ದುಡ್ಡಿನ ಯೋಚ್ನೇನೇ ಮಾಡ್ಬೇಡಿ ನೀವು. ಅವ್ರೇನೆಂಗೂ ಬ್ಯಾರೆಯಲ್ಲ ನಮ್ಮೋರೆ ಕಳ್ಳುಬಳ್ಳಿ...... ಮಗ ನಮ್ಮನ್ಯಾಗೆ ಇದ್ದಂಗೇ ಇರ್ತಾನೆ. ಬರ ದುಡ್ನ ಪೊಲಕ್ಕೊಗ್ದು ವಳ್ಳೆ ಬೆಳಿ ಬೆಳ್ಕಂಡು ಬಂಗಾರ್ದಂಗಿರ್ಬಹ್ದು. ಕರೆಯಾಗ್ಲು ಮಾವಯ್ಯ ನೀನಾ ಮನೆ ನೋಡ್ಬೇಕು ದಂಗಾಗೋಗ್ತಿ. ಆ ಮನ್ಯಾಗಿರಾಕೆ ನಿನ್ಮಗ ಪುಣ್ಯ ಮಾಡಿರ್ಬೇಕು. ನೋಡು ಯೋಚ್ನೆ ಮಾಡು......" ಕೆಂಚ ಅವರುಗಳು ಹೇಳೋದನ್ನ ಕೇಳಿಯೇ ದಂಗಾಗಿದ್ದ. "ನಂದೇನೈತಪ್ಪ ನಾನೀಗ್ಲೆ ಬೇಕಾರೆ ಕಳುಸ್ತಿ. ಆದ್ರೆ ನಮ್ ಬಸ್ವಿನ್

ವೊಪ್ಪಾದೇ ಬಲು ಕಸ್ಟ....." ಅಂದ. "ನಿನಗ್ಯಾಕ ಯೋಚ್ನೆ ಬಿಡ್ಡಾವ...... ನೀನ್ಸುವ್ನೆ ಏನೂ ಗೊತ್ತಿಲ್ದಂಗಿರು. ಅಷ್ಟುರವ್ಯಾಲೆ ಅತ್ತ ಯಾಕೋಗಿದ್ದೆ ಅಂತ್ಕೇಳಿದ್ರೆ ವಿರೇಶಿ ದುಡ್ಡಿಗೆ ಹೇಳಿಕಳಿಸಿದ್ದ ಅಂತೇಳು. ಮುಂದಿಂದು ನಮಗ್ಬಿಡು....." ವಿರೇಶಿ ಹೇಳ್ದಾಗ ಕೆಂಚ ಅದಕ್ಕೆ ತಲೆಯಾಡಿಸಿದ್ದ.

ಅಂದಹಾಗೆ ಮರುದಿನವೇ ಮಾರಣ್ಣ ಊರಿಂದ ಬಂದಿಳಿದ. ಬಹಳ ವರ್ಷಕ್ಕೆ ಬಂದ ಮಾರಣ್ಣನ ನೋಡಿ ಸಡಗರಪಟ್ಟಳು ಬಸ್ವಿ. ರಾತ್ರಿಗೆ ಕೋಳಿ ಕೊಯ್ದು, ಎಸರಿಟ್ಟು ಮುದ್ದೆ ಮಾಡಿ, ಅವರಿಬ್ಬರನ್ನ ಊಟಕ್ಕೆಬ್ಬಿಸಿದ್ಲು. ತಿಪ್ಗ ಹೊಟ್ಟೆಯ ತುಂಬ ಬರಿ ತುಂಡು ತಿಂದು ಮಲಗಿದ್ದ ಆಗಲೇ. ಮುದ್ದೆ ಮುರ್ಕಂಡು, ಸಾರಿನಲ್ಲಿ ಹೊರಳಾಡಿ ಸುತ್ತ ಹೇಳಿದ ಮಾರಣ್ಣ, "ವಿರೇಶಿ ಬಹಳ ಬೇಜಾರ್ಮಾಡ್ಕೆಂಡವನೆ ಕೆಂಚ...... ಯಂಗನ ಮಾಡಿ ಆ ಸಾಬಿ ದುಡ್ಡು ಕೊಡು......" "ಅಲ್ಮಾರಣ್ಣ ನೀನೂ ವಿರೇಸಿಯಂಗೇ ಮಾತಾಡ್ತಿಯಲ್ಲ......? ಆಟೊಂದುದುಡ್ಡು ನಾನು ಎಲ್ಲಿಂದ ವೊಂದುಸ್ಲಿಯೇಳು.....?" ಬಾಯಿ ಜೋರಾಗೇ ಮಾಡಿದ್ದ ಕೆಂಚ. "ಅಲ್ಲಪ್ಪ ಎಲ್ಲಿಂದ ತರ್‍ಲಿ ಅಂದ್ರೆಂಗ.....? ಕೊಡಕಾಗ್ದಿದ್ಮಾಕೆ ಯಾಕೆ ಇಸ್ಕಂಡೆ.....? ಇಸ್ಕಂಡ್ಯಾಕೆ ಯಂಗನ ಮಾಡಿ ಕೊಡ್ಬೇಕಪ್ಪ...... ಇಲ್ಲಾಂತಂದ್ರೆ ಯಾರ್ಕ್ಕೇಳ್ತಾರೆ.....?" ಕೆಂಚ ಮೂಳೆ ಕಟಕಟ ಕಡಿದ. "ನಾನೇನ್ಮಾಡನ ಮಾರಣ್ಣ.....? ಇರಾದೀಟು ಭೂಮಿನ ಯಾರ್ತಾವನ ಅಡವಿಡ್ಬೇಕಟೆಯು....." ಈ ಮಾತು ಕೇಳಿದ್ದೆ ಮಾರಣ್ಣ ಹಲ್ಲಿಯಂಗೆ ಲೊಚುಗುಟ್ಟಿದ. "ಅಯ್ಯ ಇಷ್ಟೊಂದು ಸಣ್ಣ್ಪ್ಯಕ್ಕೆ ಎಟೊಂದು ತಲೆಕೆಡ್ಸಿಕೆಂತಿಯಲ್ಲಾ ನೀನೂ......? ನೋಡ್ಕೆಂಚ ನಾನೊಂದ್ಮಾತು ಹೇಳ್ತೀನಿ ಕೇಳ್ತಿಯಾ......? ನಾನೇಳಾದು ನಿನ್ನ ಬಲಕ್ಕೆಯಾ....... ಮತ್ತೆ ನೀನು ಮುನ್ನು ಸಣ್ಣಗ್ಮಾಡ್ಕೆಬಾರ್‍ದು......." ಈ ಮಾತು ಕೇಳಿದ ತಕ್ಷಣ ಹೇಳಿದ್ದ ಕೆಂಚ "ಅಯ್ಯ ಎಲ್ಲಾದ್ರುಂಟೇನಣ್ಣಾ.......? ಅದೇನ್ಯೇಳು...." ಹೇಳುತ್ತಲೇ ಹೆಂಡತಿಯನ್ನು ಕೂಗಿ ಕರೆದ "ಲೇ ಬಸ್ವಿ ಮಾರಣ್ಣನಿಗೆ ಇನ್ನೊಂದ್ನಾಕು ತುಂಡಾಕೆ......" ಅಂತ. ತಟ್ಟೆಗೆ ತುಂಡು ಬೀಳುತ್ತಲೇ ಶುರು ಮಾಡಿದ ಮಾರಣ್ಣ. "ನಮ್ಮ ಆಫೀಸರ್‍ರು ಶಿವಣ್ಣ ಗೊತ್ತೆತಲ್ಲ ಕೆಂಚ......? ಅದೇ ನಿವಸ್ ಬಸಜ್ಜನ ವೊಮ್ಮಗ....." "ಅಲೆ ಗೊತ್ತಿಲ್ದೇನೇಳು ಮಾರಣ್ಣ ನೋಡಿ ಭಾಳ ವರ್ಸಾತು ಅಂದ್ರೆ....." ಅವರಿಬ್ಬರ ಮಾತುಗಳನ್ನ ಆಲಿಸಿ ಬಸ್ವಿ ಕಿವಿನಿಮಿರಿಸಿ ಕೂತಳು. "ಶಿವಣ್ಣನ ಮನ್ಯಾಗೆ ಇರೋರು ಮೂರ್‍ಜನ. ಗಂಡಯೆಣ್ತಿ, ಮಗ. ಆಯಮ್ಮನೂ ಹೊರಗೆ ದುಡೀತೈತೆ. ಅದ್ಕೆ ವ್ಯಾಲಿನ್ಕೆಲ್ಸಕ್ಕೆ ಒಬ್ಬ ಹುಡ್ಗ ಬೇಕಂತೆ. ಅವ್ನು ನಮ್ಮುಪೈಕಿನೆ ಆದ್ರೆ ಚನ್ನಾಗಿರ್‍ತೆತೆ ನೋಡು ಅಂತ ಶಿವಣ್ಣ ವೊನ್ನೆ ಆಫೀಸಿನ್ತಾವ ಯೇಳಿದ್ನೇಳು. ನನಿಗೆ ನಿಮ್ಮುಡುಗುನ್ದು ನೆಪ್ಪಾಗಿ ಯೇಳ್ದೆ ಆವಣ್ಣನಿಗೆ. "ದುಡ್ಡಿಗೇನು ಯೋಚ್ನೆ ಮಾಡ್ಬೇಡ್ರಿ....." ಅಂದು "ನಿನೋಗಿ ಹುಡ್ಗನ್ನ ಕರ್‍ಕಂಡ್ಬಾ" ಅಂದ ಶಿವಣ್ಣ. "ನಿನ್ಗೂ ಇಲ್ನೋಡಿದ್ರೆ ದುಡ್ಡಿನ ತೊಂದ್ರೆ ಇದ್ದಂಗಿತ್ತು. ಅದ್ಕೆ ನೋಡು ಹೆಂಗ್ಮಾಡ್ತಿ....." ಮಾರಣ್ಣ ಮಾತು ನಿಲ್ಲಿಸಿದ್ದೆ ತಡ ಬಸ್ವಿ ದಡಕ್ಕನೆ

ಎದ್ದು ಬಂದು "ಅಯ್ಯೊ ಅದೆಲ್ಲೆದಚ್ಚಿದಿ ಎಳಾನವ್ಮಪ್ಪ...... ಇರಾದೊಂದು ಕೂಸಿನ್ಮೇಲೆ ಅದೇನ್ಕಣ್ಣು ನಿಮ್ದೂ.....? ಬ್ಯಾರೇನರ ಇದ್ರೆಯೇಳು ಇಲ್ಲಂದ್ರೆ ಸುಮ್ಕಿರು....." ಅಂದು ಕೈತೊಳೆದಿದ್ದ ತಟ್ಟೆ ಎತ್ತಿಕೊಂಡು ಹೊರಗೋದಳು. ಗಂಡಸರಿಬ್ರು ಸ್ವಲ್ಪ ಹೊತ್ತು ಮೌನವಾಗಿ ಕುಳಿತರು. "ಮನ್ಸಿಗೇನು ತಿಳ್ಕಬ್ಯಾಡ ಮಾರಣ್ಣ...." ಅಂದ ಕೆಂಚ. ಮಾರಣ್ಣ ಟವೆಲ್ ಕೊಡವಿ ಏಳುತ್ತ "ಏನೋ ನಿಮ್ಮ ಒಳ್ಳೇದಕ್ಕಂತ ಹೇಳ್ದೆ ನೋಡಪ್ಪ.... ನಮ್ಗೇನೋ ನಮ್ ಕಳ್ಳುಬಳ್ಳಿ ಉದ್ಧಾರಾಗ್ಲಿ, ಒಂದು ಮಟ್ಟಕ್ಕೆ ಬರ್ಲಿ ಅಂಬ ಆಸೆ........ ನಿಮ್ಮಿಷ್ಟ ಬಂದಂಗ್ಮಾಡ್ರಿ. ಶಿವಣ್ಣನಿಗೇನ್ ಕೆಂಚ ಬೇಕಾದಂಗೈತೆ. ನಿನ್ಮಗ ಇಲ್ದಿದ್ರೆ ಬ್ಯಾರೆ ಯಾರನ ಬರ್ತಾರೆ...." ಅಂತ ಹೊರಟು "ವಿರೇಶಿನ ಕಳುಸ್ತಿ ನಾಳೆ ನೋಡ್ರಿ ಎನ್ಮಾಡ್ತೀರಿ...." ಎಂದು ಬಸ್ಸತ್ತಿದ್ದ. ಕೆಂಚ 'ಇವತ್ತು ಇವ್ಳಿಗೆ ಸರ್ಯಾಗಿ ರಿಪೇರಿ ಮಾಡೇಬಿಡ್ತೀನಿ.....' ಅಂದುಕೊಳ್ಳುತ್ತ ಮನೆ ಸೇರಿದ. ಆದರೆ ಬಸ್ವೀನ ನೋಡಿದ್ಮೇಲೆ ಮಾತೂ ಹೊರಗೆ ಬರಲಿಲ್ಲ. ಬಸ್ವಿ ಮುಖ ಊದಿತ್ತು. ಮಾರಣ್ಣನ ಮಾತು ಕೇಳಿ ಅವಳ ಹೊಟ್ಟೆಯಲ್ಲಿ ಬೆಂಕಿ ಬಿದ್ದಂಗಾಗಿತ್ತು. ಮಗನ್ನ ಗಟ್ಟಿಗೆ ತಬ್ಬಿಕೊಂಡು, ಸೆರಗಿನಲ್ಲಿ ಮುಚ್ಚಿಕೊಂಡು ಮಲಗಿದ್ಲು ರಾತ್ರಿಯೆಲ್ಲಾ. ಕಣ್ಣಾಗಿನ ನೀರು ತಪ್ಪಲೇ ಇಲ್ಲ. ಕೆಂಚನಿಗೋ ಒಳ್ಳೆಯ ಪೀಕಲಾಟ. ಆ ಕಡೆ ಸಾಲಗಾರನ ಕಾಟ. ಒಂದೆಡೆ ಅವ್ವಮಗನ ಯೋಚ್ನೆ. ಇನ್ನೊಂದೆಡೆ ವಿರೇಶಿ, ಮಾರಣ್ಣನ ಮಾತುಗಳು. ಅವ್ನು ಅತ್ತಇತ್ತ ಹೊಯ್ದಾಡುತ್ತಿದ್ದಾಗಲೇ ವಿರೇಶಿ, ರತ್ನಿ ಬಂದಿಳಿದರು. ವಿರೇಶಿಯಂತೂ ಕೂಗಾಡುತ್ತಲೇ ಮನೆಯೊಳಗೆ ಕಾಲಿರಿಸಿದ್ದ "ಅಲ್ಮಾವ ದುಡ್ಡಿಸ್ಕಂಡು ಬಂದೋನು ಮತ್ತೆ ಆ ಕಡಿಗೆ ತಿರ್ಗಿ ನೋಡ್ದಂಗಿದ್ರೆ ಏನ್ಗತಿ.....? ವಟ್ಟೇಗೇನ್ತಿಂತಿ ಮಾವ ನೀನೂ......? ಇಸ್ಕಬೇಕಾದ್ರೆ ಇರೋ ತೆವ್ಲು ಕೊಡ್ಬೇಕಾರೆ ಇರಲ್ನೋಡು..... ಅಲ್ಲಾ, ಜನ ಸಾಲಸಾಲ ಅಂತ ನಮ್ಮನಿಗೆ ಅಲೆದಾಡಿದ್ರೆ ನನ್ನ ಪ್ರೆಸ್ಟೇಜೇನಾಗ್ಗೈತೆ ಯೇಳು.....? ಏಟನಾಗ್ಲಿ ಮಾನಮರ್ವಾದೆ ಇಲ್ಲದ ಜನ ನೀವೂ....." ಅಂತ ಒಂದೇಸಮನೆ ಒದರಾಡಿದ. ಇತ್ತ ರತ್ನಿ ಅವ್ವನ ಬಳಿ "ಯೇನವ್ವಾ, ಯಿಂಗೆಲ್ಲ ಮಾಡಿದ್ರೆಂಗವ್ವಾ......? ಅಲ್ಲಾ, ಆ ಸಾಬಿ ವತಾರೆ ಮನೆಗ್ತಾವ ಬಂದಿದ್ದೆ ಸೈ ನೋಡು, ವಳ್ಳೆ ದನಕ್ಕೆ ಬಡ್ದಂಗೆ ಬಡ್ದೂ....... ಬಾಯಿಗ್ಬಂದಂಗೆ ಬೈದು ನಿಂತು ನಿಲುವಿನ್ಯಾಗೆ ಕರ್ಕಂಡದೇ ಬಂದ್ರು....." ಅಂತ ಸೊರಸೊರ ಅಂದ್ಳು. ಕಣ್ಣು, ಮೂಗು ಒರೆಸಿಕೊಂಡು "ಮಾರಣ್ಣ ಬಂದ್ರೆ ಬೈದು ಕಳ್ಸಿದ್ಯಂತೆ.......? ಅಲ್ಲವ್ವ, ಆ ಹುಡ್ಗನ್ನ ಮನ್ಯಾಗಿಟ್ಕಂಡು ಎನ್ಮಾಡ್ತಿಯೇಳವ್ವಾ......? ಇತ್ಲಾಗೆ ಓದುಬರಹ ಕಲ್ತಂಗರ ಅಲ್ಲ. ಆತ್ಲಾಗೆ ಪೊಲಮನಿ ಕೆಲ್ಸನರ ಕಲ್ತಂಗಲ್ಲ. ಸುಮ್ಕೆ ಪೋಲಿ ತಿರ್ಗಾಕೆ ಬಿಟ್ಟಿದಿಯಲ್ಲಾ.....? ಹತ್ತೊರ್ಷದ ಕತ್ತೆ ಅದು..... ಈಗನ ದುಡ್ಕಂಡು ತಿಂಬಾ ದನ್ನ ಕಲ್ಸು......" ರತ್ನಿ ಮೂಗು ಮುಸುಡಿ ತಿರುವಿದ್ಲು..... "ಹೊಲನ ಅಡವಿಟ್ಟಾಗ ದುಡ್ತಂದು ಒಪ್ಸಿದ್ರೆ ಸರಿ...." ಅಂತ ಗಂಡಹೆಂಡ್ತಿ ಇಬ್ಬರು ನಿಷ್ಠುರವಾಗಿ ಹೇಳಿ ಹೋದಾಗ ಬಸ್ವಿ ಮೆತ್ತಗಾದ್ಲು. ತಿಪ್ಪ ಶಿವಣ್ಣನ ಮನೆ ಸೇರಿದ್ದ.

"ಏಯ್ ತಿಪ್ಪೇಶಿ...... ಕಿಚನೆಲ್ಲಾ ಕ್ಲೀನ್ಮಾಡ್ದೇನೊ......?" ಕೂಗುತ್ತಲೇ ಬಂದಳು ಇಂದ್ರ. "ಹೂಂನಕ್ಕ ಆತು....." ಅಂದು ಹಿತ್ತಲಕಡೆಗೆ ಓಡಿ ಕೈನಲ್ಲೊಂದು ಅಲ್ಯುಮಿನಿಯಂ ತಟ್ಟೆ, ಲೋಟ ಹಿಡಿದುಕೊಂಡು ಬಂದ ತಿಪ್ಪ. ಇಂದ್ರ ಒಳಗಿನಿಂದ ಒಂದು ಪಾತ್ರೆಯಿಡದು ಬಂದು, ಅದರಲ್ಲಿನ ಅನ್ನಸಾರನ್ನು ಆ ತಟ್ಟೆಗೆ ಸುರುವಿ "ಬೇಗ ತಿಂದು ಮಲ್ಕೊ....." ಎಂದು ಅಡುಗೆ ಮನೆಯ ಬಾಗಿಲಿಕ್ಕಿ ಹೋದಳು. ತಟ್ಟೆ ಹಿಡಿದುಕೊಂಡು ಹಿತ್ತಲಿನತ್ತ ಹೋದ ತಿಪ್ಪ. ಕೆಂಚನಿಗೆ ಬಲು ಸೋಜಿಗವಾಯ್ತು. ಅವನೆಂದೂ ಇಲ್ಲಿ ಉಳಿದಿರಲಿಲ್ಲ. ಮನೆಯ ಒಳಗಿನದೇನೂ ಅವನಿಗೆ ಗೊತ್ತಿರಲಿಲ್ಲ. "ಅದ್ಯಾಕ್ಮಗ ನಿನಿಗೆ ಬ್ಯಾರೆ ಸಿಲಾವರುದ್ತಟ್ಟೆ.....?" ಎಂದು ತಿಪ್ಪನನ್ನು ಕೇಳಿದ. "ಇಲ್ಲಂಗೆಯಾ....." ಅಂತ ತಿಪ್ಪ. ತಟ್ಟೆಯಲ್ಲಿನ ಅನ್ನವನ್ನ ಗಬಗಬನೆ ತಿನ್ನುತ್ತಿದ್ದ. ಅವನು ಹಸಿದಿದ್ದ. "ವೋಗ್ಲೋಗು ಇನ್ನಂದ್ಸಲ್ಪ ಅನ್ನಯಿಕ್ಕಂಡು ತಿನ್ಲೋಗು......" ಅಂದ ಕೆಂಚ. "ಇಲ್ಕಣಪ್ಪ ಎಲ್ಲಾ ಖಾಲಿ ಆಗೈತೆ. ನಾನೇ ಯಲ್ಲಾ ಕಿಲೀನ್ಮಾಡ್ದೆ......" ಅಂದು ಸರಸರ ಎದ್ದು, ತಟ್ಟೆಲೋಟ ತೊಳೆದಿಟ್ಟು, ಅಲ್ಲೇ ಮೂಲೆಯಲ್ಲಿ ನಿಲ್ಲಿಸಿದ್ದ ಚಾಪೆ, ಚಾದರ ಹಿಡಿದು "ಬಾರಪ್ಪ ಮಲ್ಗನಾ....." ಅಂತ ಹೊರಟ ತಿಪ್ಪ. ಬಸವಿ ಮಗನ ನೆನಪಾಗಿ ಕಣ್ಣೀರು ಹಾಕಿದಾಗಲೆಲ್ಲಾ "ಯಾಕಳ್ತಿಯೇ ಬಸ್ವಿ ಸುಮ್ಕೆ..... ನಿನ್ಮಗ್ನೇನು ಬ್ಯಾರೆ ಮನ್ಯಾಗದನೇನು.......? ನಮ್ ಕಳ್ಳುಬಳ್ಳಿ ಮನ್ಯಾಗಿರಾದು. ಅಲ್ಲಿ ಇಲ್ಲಿಗಪ್ಪನಂಗೆ ಉಣ್ಕಂಡು ತಿನ್ಕಂಡು ಇರ್ತಾನೇಳು...." ಅಂತಿದ್ದ ಕೆಂಚ. ಅವ್ನಿಗ್ಯಾಕೋ ಕಣ್ಣುಮುಚ್ಚಲು ಆಗಲೇ ಇಲ್ಲ. ಕಣ್ಣು ಮುಚ್ಚಿದೊಡನೆ ತಟ್ಟೆ ತುಂಬಾ ಸಾರು ಹಾಕಿ, ಬಿಸಿ ಮುದ್ದೆಯಿಟ್ಟು, ಪಕ್ಕದಲ್ಲಿ ಕೂತು ಮಗನಿಗೆ ಉಣ್ಣಿಸುತ್ತಿದ್ದ ಬಸ್ವಿಯ ಚಿತ್ರ ಅವನನ್ನ ಬೆಚ್ಚಿಬೀಳಿಸುತ್ತಿತ್ತು. ಪಕ್ಕದಲ್ಲಿ ಮಲಗಿದ್ದ ತಿಪ್ಪ "ಅಪ್ಪಾ, ಹಬ್ಬಕ್ಕೆ ಊರಿಗೆ ಕರ್ಕಂಡೋಗು.... ಅವ್ವನ್ನ ನೋಡಂಗಾಗೈತೆ...." ಅಂದಾಗ ಕೆಂಚನಿಗೆ ಸ್ವರ ಹೊರಡದಾಯ್ತು. ಮತ್ತೆ ತಿಪ್ಪನೇ ಹೇಳಿದ "ಮೊನ್ನಿನಾಗೆ ವಿರೇಶ್ಮಾವ, ಮಾರಪ್ಮಾವ ಬಂದಿದ್ರು. ಆಯಕ್ಕನ್ತಾವ ಏನೆನ ಯೇಳಿ ದುಡ್ಡಿಸ್ಕಂಡೋದ್ರು...." ಯಾರೋ ಎದೆಗೆ ಗುದ್ದಿದ ಹಾಗಾಯ್ತು ಕೆಂಚನಿಗೆ. "ಅದ್ಕೆ ಸಿವಣ್ಣಂಗೆ ಮಾತಾಡ್ದಬಿಡು. ಯಂಗೋ ಇನ್ನೊಂದ್ನಾಕ್ದಿವ್ಸ ಇರು ಆಮ್ಯಾಕೆ ಊರಿಗೋಗನ ಆತ್ಲಾಗೆ...." ಅಂದು ನಿಟ್ಟುಸಿರಿಟ್ಟ ಕೆಂಚ.

ಮೂರನೆಯ ದಿನ ಪುರುಸೊತ್ತೆ ಇಲ್ಲದಷ್ಟು ಕೆಲಸ ಅವರಿಗೆ. ಒಂದೈವತ್ತು ಜನ ಬಂದಿದ್ದರು ಊಟಕ್ಕೆ. ತಿಪ್ಪ ಹೊರಗೆ ತಟ್ಟೆಗಳನ್ನ ತೊಳೆಯುತ್ತಿದ್ದ. ಕೆಂಚ ಎಲ್ಲರೂ ಉಂಡುಬಿಟ್ಟ ತಟ್ಟೆಗಳನ್ನು ಎತ್ತಿಕೊಂಡು ಹೋಗಿ ಮಗನಿಗೆ ಕೊಡುತ್ತಿದ್ದ. ಎಲ್ಲಾ ಮಾಂಸದಡುಗೆ, ಆದರೆ ಯಾರೂ ಸರಿಯಾಗಿ ತಿನ್ನದೆ ಎಲ್ಲಾ ಹಾಗೆಯೇ ಬಿಟ್ಟು ಕೈ ತೊಳೆದಿದ್ದರು. "ಬಲೇ ಅನ್ಯಾಯದ ಜನ ಕಣ್ಲೆ ತಿಪ್ಪ ಈ ಪ್ಯಾಟಿ ಜನ. ಅಲ್ಲಾ, ಬರೇ ಇದ್ರೆ ಎನ್ಬಂತೇಳು ಸರ್ಯಾಗಿ ಉಣ್ಣಾಕ್ತಿನ್ನಾಕೆ ಬರ್ದಿದ್ಯಾಕೆ...." ಅಂದು, ತಿಪ್ಪ ತೊಳೆದಿಟ್ಟಿದ್ದ ತಟ್ಟೆಗಳನ್ನ ಎತ್ತಿಕೊಂಡು ಒಳ

ಹೋದ. ಅಡುಗೆಮನೆಯಲ್ಲಿ ಇಂದ್ರ ಇದ್ದಳೆಂದು ಬಾಗಿಲಲ್ಲೆ ನಿಂತ. ಅವಳು ಇವನನ್ನು ನೋಡಲಿಲ್ಲ. ಅಲ್ಲಿಯೇ ಕಟ್ಟೆಯ ಮೇಲೆ ನಾಲ್ಕು ಎಂಜಲು ತಟ್ಟೆಗಳಿದ್ದವು. ಆ ತಟ್ಟೆಗಳಲ್ಲಿ ಹಾಕಿದ್ದ ಮಾಂಸದ ತುಂಡುಗಳೆಲ್ಲ ಹಾಗೆಯೇ ಇದ್ದು, ಅದರಲ್ಲಿಯೇ ಕೈ ತೊಳೆದಿದ್ದರು ಯಾರೋ ಪುಣ್ಯಾತ್ಮರು. ಇಂದಿರ ಆ ತಟ್ಟೆಗಳಲ್ಲಿನ ಎಂಜಲು ನೀರನ್ನೆಲ್ಲ ಬಸಿದು, ತುಂಡುಗಳನ್ನೆಲ್ಲ ಮೇಲಿಟ್ಟಿದ್ದ ಹಳೆಯದಾದ ಒಂದು ಅಲ್ಯುಮಿನಿಯಂ ಪಾತ್ರೆಯೊಳಗೆ ಹಾಕಿಟ್ಟಳು. ಎಲ್ಲವನ್ನು ನೋಡಿದ ಕೆಂಚ "ಈ ಮನೆಯ ನಾಯಿಗಳೇ ಪುಣ್ಯದವು...." ಎಂದುಕೊಳ್ಳುತ್ತ ಮೆಲ್ಲನೆ ಒಳಗೋಗಿ ತಟ್ಟೆಗಳನ್ನಿಟ್ಟು ಹೊರಬಂದ. ಬಂದವರ ಊಟವೆಲ್ಲ ಮುಗಿದ ಬಳಿಕ ಕೆಂಚನಿಗೆ ತಟ್ಟೆ ಬಂತು. ತಿಪ್ಗ ಇನ್ನೂ ಹೊರಗೆ ಏನೋ ಮಾಡುತ್ತಲಿದ್ದ. ಕೆಂಚ ತಾನುಂಡ ತಟ್ಟೆಯನ್ನು ಎತ್ತಿಕೊಂಡು ಹೋಗುವ ಹೊತ್ತಿಗೆ ತಿಪ್ಗ ಕೆಲಸವನ್ನೆಲ್ಲ ಮುಗಿಸಿ, ಹಿತ್ತಲಲ್ಲಿದ್ದ ತನ್ನ ತಟ್ಟೆ, ಲೋಟ ಹಿಡುದು ಹೊರಟಿದ್ದ. ಕೆಂಚ ತಟ್ಟೆಯನ್ನು ತೊಳೆದು, ಅದನ್ನ ಅಡುಗೆಯ ಮನೆಯಲ್ಲಿಟ್ಟು ಹೊರಗೆ ಉಣ್ಣುತ್ತಿದ್ದ ತಿಪ್ಗನ ಪಕ್ಕಕ್ಕೆ ಹೋಗಿ ಕೂತ. ತಿಪ್ಗನ ತಟ್ಟೆಯಲ್ಲಿ ಅನ್ನ, ಸಾರು ಒಂದ್ನಾಲ್ಕು ಎಲುಬಿನಂತ ತುಂಡುಗಳಿದ್ದವು. "ಬೆಳಗ್ಗಿಂದ ಮುಕ್ಕಿ ಮುರಿಯಂಗೆ ದುಡುದ್ರೂ ವಟ್ಟುಂಬಾ ಉಣ್ಣಾಕ್ಕೀಕಾಕೆ ಯಂಗಾಡುತಲ್ಲ ಈ ಯಂಗ್ಲೂ..... ? ಯೇಟೊಂದು ಜನ ಪುಕ್ಸಟ್ಟೇರು ಬಂದು ತಿಂದು ಬಿಸಾಕಿ ವೋದ್ರೆ ಖುಸಿ ಇವ್ರಿಗೆ..... ದುಡಿಯ ಮಕ್ಳಿಗೆ ವಟ್ಟೆ ತುಂಬ ಇಕ್ಕಾಕ್ಕೇನ್ ಧಾಡಿಯಿ ಕೀಗೆ...... ?" ಸಂಕಟದಿಂದ ಒಬ್ಬನೆ ಮಗನ ಮುಂದೆ ಒದರಾಡಿದ ಕೆಂಚ. ಅವನ ಹೊಟ್ಟೆಯಲ್ಲಿ ಉರಿ ಎದ್ದಿತ್ತು. ಆ ಹೊತ್ತಿಗೆ ಒಳಗಿಂದ ಇಂದ್ರ ತಿಪ್ಗನ್ನ ಕೂಗಿದಳು. "ಬಂದೇ....." ಎನ್ನುತ್ತ ಉಣ್ಣುವುದನ್ನು ನಿಲ್ಲಿಸಿ ಓಡಿದ ತಿಪ್ಗ. ಬರುವಾಗ ಅವನ ಕೈಯಲ್ಲಿ ಒಂದು ಸಣ್ಣ ಹಳೆಯ ಅಲ್ಯುಮಿನಿಯಂ ಪಾತ್ರೆಯಿತ್ತು. ಅದರ ತುಂಬಾ ತುಂಡುಗಳಿದ್ದು, ಅವುಗಳನ್ನು ತನ್ನ ತಟ್ಟೆಗೆ ಸುರುವಿಕೊಂಡ ತಿಪ್ಗ. ಕೆಂಚ ಕಣ್ಣು ಕೆಕ್ಕರಿಸಿ ನೋಡಿದ. ಇಂದ್ರ ಎಂಜಲು ತಟ್ಟೆಯ ನೀರು ಬಸಿದು, ಅದರಿಂದ ಆಯ್ದು ಇಟ್ಟಿದ್ದ ತುಂಡುಗಳಿದ್ದ ಪಾತ್ರೆಯದು. ಬರಿಯ ಒಗ್ಗರಣೆಯಲ್ಲೆ ಕೋಳಿಯನ್ನ ಉಪ್ಪಾಕಿ ಮೆತ್ತಗೆ ಬೇಯಿಸಿ ಮಗನ ಮುಂದೆ ಇಡುತ್ತಿದ್ದ ಬಸ್ವಿಯ ನೆನಪಾಯ್ತು. ಅವನ ಕರುಳು ಕಿವುಚಿದಂಗಾಯ್ತು. "ಉಣ್ಬೇಡ ಬಿಡಲೇ...." ಅಂತ ತಿಪ್ಗನ ತಟ್ಟೆಯನ್ನು ಕಸಿದುಕೊಂಡ. "ಅಪ್ಪಾ ಕೊಡಪ್ಪ..... ಬಾಳ ವಟ್ಟೆ ಹಸದೈತೆ ಕೊಡಪ್ಪಾ" ಅಂತ ತಿಪ್ಗಾ ತಟ್ಟೆಗೆ ಕೈಹಾಕುತ್ತಿದ್ದಂತೆ ಅವನಿಗೊಂದು ಎತ್ತಿ ಬಾರಿಸಿದ. "ವೋಗಲೇ ಒಂದಿನ ಉಣ್ದಿದ್ರೇನು ಸಾಯಲ್ಲ ವೋಗು...... ವೋಗಿ ಕೈಚೀಲ ವೊಂದಿಸ್ಯ......." ಅಂದವನೆ ತಟ್ಟೆಯನ್ನು ಸೀದಾ ಶಿವಣ್ಣನ ಮುಂದೆ ಎತ್ತಿಕೊಂಡು ಹೋದ. ಹಾಲ್‌ನಲ್ಲಿ ಎಲ್ಲರೂ ಕೂತು ತಾಂಬೂಲ ಮೆಲ್ಲುತ್ತ ಮಾತಿನಲ್ಲಿ ತೊಡಗಿದ್ದರು. ಅಲ್ಲಿದ್ದ ಇಂದ್ರನ್ನ ನೋಡಿ "ಯೇನವ್ವ ಯಿಂದ್ರವ್ವ ನಿನ್ನ ದೊಡ್ಡಾಗನಸ್ತೆ ಅಂದ್ಕಂಡಿದ್ನಲ್ಲವ್ವಾ..... ನನ್ ಮಗುನ್ನ ನಿನ್ ಮನೆ ಕಾಯೋ ನಾಯಿ ಅಂತ ತಿಳ್ಕಂಡೇನವ್ವಾ...... ?" ಅಂದಾಗ ಅಲ್ಲಿ ಕುಂತಿದ್ದವರೆಲ್ಲ ಒಮ್ಮೆಲೆ ಎಗರಿಬಿದ್ದರು. "ಎಯ್ ಏನೋ ಅದು ಗಲಾಟೆ.... ? ಏನಾಯ್ತೀಗ ?" ಶಿವಣ್ಣ

ರೇಗಿದ. "ಯೇನಾಗೈತೆ ಅಂತ ನಿನ್ನೆಣ್ತ್ನೇಳು. ಅಲ್ಲಾ...... ಯಾರೋ ಉಂಡು, ಕೈ ತೊಳ್ಕಂಡು ಬಿಟ್ಟಿದ್ದ ತಟ್ಯಾಗಿಂದ ತುಂಡು ಆಯ್ದಿಟ್ಟು, ನನ್ಮಗನಿಗೆ ತಿನ್ನು ಅಂತ ಕೊಟ್ಟಿದಾಳಲ್ಲ.... ವಟ್ಟೆಗೆ ಅನ್ನ ತಿಂಬಾರ್ಮಾಡ ಕೆಲ್ಸನಾಯಿದೂ.....?" ಕೆಂಚನೂ ಆವೇಶಗೊಂಡಿದ್ದ. "ಎಯ್ ನೆಟ್ಟಗೆ ಮಾತಾಡೋ...." ಕೆಂಪಗಾಗಿದ್ಲು ಇಂದ್ರ. "ಯೇನ್ ನೆಟ್ಗವ್ವ....? ನೀನ್ಮಾಡಿರ ಬದ್ಕು ನೆಟ್ಟಗಿದ್ದಿದ್ರೆ ನನ್ಮಾತೂ ನೆಟ್ಟಗಿ ರಾವು.... ಅಲ್ಲವ್ವ ನನ್ಮಗನ್ಗೆ ನೀನೇನ್ ಬಿಟ್ಟಿ ಕೂಳಾಕ್ತೀಯಾ.....? ಯೇನ್ ವೊದಿದ್ರೇನ್ ಬರುದ್ರೇನ್ ವಳ್ಳೆ ಗುಣ ಇಲ್ದಿದ್ಮಾಕೆ...." ಅಂದ ಕೆಂಚ. "ಸಾಕ್ಮುಚ್ಕೊ ಬಾಯ್ನ್...." ಶಿವಣ್ಣ ಗದರಿದ. "ಅದ್ಯಾಕಪ್ಪ.....? ನಾನೇನು ನಿನ್ನ ಮನ್ಯಾಗೆ ಕಳ್ತನ ಮಾಡಿಲ್ಲ ಬಾಯ್ಮುಚ್ಚಾಕೆ. ನನಗೇನು ತಿಂಬಾಕೆ ಗತಿಯಿಲ್ಲ ಅಂತ ನನ್ಮಗುನ್ನ ನಿನ್ ಮನ್ಯಾಗೆ ಬಿಟ್ಟಿದಿನಿ ಅಂದ್ಕಂಡಿಯಾ......? ಇಲ್ಲ..... ನಿನ್ದುಡ್ಡು, ದೊಡ್ಡಸ್ತಿಕೆ ನೋಡಿ ನನ್ಮಗುನ್ನ ನಿನ್ ಮನ್ಯಾಗೆ ಬಿಟ್ಟೇನಿ ಅಂದ್ಕೊಂಡಿಯಾ.....? ಯೇನೋ ನಮ್ ಜನ, ನಮ್ ಕಳ್ಳುಬಳ್ಳಿ ನಿಮ್ಗೂ ಒಂದು ಆಸರ, ನನ್ ಮಗುನ್ಗೂ ಒಂದು ಆಸರ ಅಂತ ಬಿಟ್ಟೆ. ನೀನಿವತ್ತು ಯೇಟು ದೊಡ್ಮನ್ಸ ಯಾಕೆ ಆಗಿರ್ವಲ್ಲಿ ಯೇಳು...... ನಿಮ್ಮಪ್ಪ, ನಿಮ್ಮಜ್ಜ ಸಣ್ಣೋಯ್ಸನಾಗೆ ಗೌಡ್ರ ಮನ್ಯಾಗೆ ಸಗ್ಣಿ ಬಾಚಿ, ಎಂಜಲೆತ್ತಿ ಬದುಕ್ದಾರು. ಮರಿಬಾರ್ದಪ್ಪ ಶಿವಣ್ಣ ಮೂಲ ಮರಿಬಾರ್ದು. ಎನಿದ್ಯೆ ಬುದ್ಧಿ ಕಲ್ತು, ದೊಡ್ಡ ದೊಡ್ಡ ಜನರು ಜತೀಗೆ ಕುಂತೆದ್ರು ಸಣ್ರನ, ಸಣ್ ಬುದ್ಧಿ ತನ್ನ ರಕುತದಾಗೆ ಹರೀತೈತೆ ಅಂತ ತೋರ್ಸಿದ್ಲು ನಿನ್ನೆಣ್ತಿ ಇವತ್ತು. ಬರ್ತೀನಪ್ಪ, ನಾನು ನನ್ಮಗನ್ನ ಕರ್ಕಂಡು ವೋಗ್ತಿನಿ...." ಅಂತ ಹೊರಟ ಕೆಂಚ "ಕರ್ಕಂಡು ಹೋಗೋ ಯಾರು ಬೇಡಾಂತರೆ ನಿನಗೆ.....? ನಿಮ್ಗೆಲ್ಲ ಹೊರಗಡೆ ನಿಲ್ಸಿಸಿ, ಎತ್ತಿ ಕೂಳಾಕಿ ದೂರ ಸರೀತಾರಲ್ಲ ಅವ್ರೆ ಸರಿ....... ಅವ್ರೆ ಸರಿ ನಿಮ್ಗೆ. ಅಲ್ಲಿಗೇ ಲಾಯಕ್ಕು ನೀವೂ..." ಇಂದ್ರ ಬುಸುಗುಟ್ಟಿದಳು. ಕೆಂಚ ನಿಂತು "ಹೌದವ್ವ ನೀನು ಯೇಳಾದು ಸರಿನೇಯ. ಯೇನೋ ನಾಕು ಅಕ್ಸರ ಕಲ್ತೆ ನಾಕ್ದುಡ್ಡು ಸಂಪಾದಿಸ್ದೆ ಅಂತ ನೀನೇ ನಮ್ಗೆ ಅನ್ನ ಎತ್ಯಾಕ್ತಿ, ಬ್ಯಾರೆ ತಟ್ಟೆಲೋಟ ಇಟ್ಟಿದಿ...... ಹೊರಗೆ ಉಣ್ಣಾಕೆ ಕುಂದ್ರುಸ್ತಿ..... ಎಂಜಲು ತಿನ್ನಾಕಾಕ್ತಿ ಅಂದ್ಮಾಕೆ ಅನಾದಿ ಕಾಲದಿಂದ ನಡೆಸ್ಕಂಡು ಬಂಧಿರಾರ್ದು ಯಾವ ಲೆಕ್ಕಯೇಳು......? ವರಾಗ್ನಿಲ್ಸಿ ಉಣ್ಣಾಕೆ ಹಾಕಾರೂ, ನಮ್ಮನ್ನ ನೋಡಿ ದೂರ ಸರ್ಕಳಾರೂ ಬ್ಯಾರೆರವ್ವಾ...... ಅವ್ರೆಲ್ಲ ಬ್ಯಾರೆ; ಆದ್ರೆ ನೀವೂ.....? ನೀವು ನಮ್ಮರವ್ವ..... ನಮ್ ಜನ, ನಮ್ ಕಳ್ಳುಬಳ್ಳಿ ಕಣವ್ವ ನೀವೂ ನಮ್ ಕಳ್ಳುಬಳ್ಳಿ....." ಕಣ್ಣಲ್ಲಿ ತುಂಬಿ ಬಂದ ಕಂಬನಿಯನ್ನ ತೊಡೆದುಕೊಂಡು, ಕೈಚೀಲ ಹಿಡಿದು ನಿಂತಿದ್ದ ತಿಪ್ಪನ ಕೈಯಿಡಿದುಕೊಂಡು ಹೊರಟ ಕೆಂಚ. ಮಗನನ್ನ ನೋಡಿದ್ದ ಬಸ್ವಿ ಹೇಗೆ ಖುಷಿಪಡಬಹುದು.....? ಎಷ್ಟು ಸಂಭ್ರಮಪಡಬಹುದು.....? ಎಂಬುದನ್ನ ಕಲ್ಪಿಸಿಕೊಳ್ಳುತ್ತ ತನ್ನೆದೆಯ ಲ್ಲಿನ ತಳಮಳ, ನೋವು, ತನ್ನ ಹೊಟ್ಟೆಯಲ್ಲಿನ ಸಂಕಟವನ್ನ ಮರೆಯುವುದಕ್ಕೆ ಪ್ರಯತ್ನಿಸಿದ.

* * *

# ವ್ಯಭಿಚಾರ

"ಲೇ ಸುಜೀ...... ಅದು ಬರ್‍ತಿದೇ ಕಣೇ......" ಎಂದು ಕೂಗುತ್ತ ಮಧ್ಯಾಹ್ನದ ಸಿಹಿನಿದ್ದೆಯ ತಯಾರಿಯಲ್ಲಿದ್ದ ನನ್ನನ್ನು ನನ್ನ ತಂಗಿ ಸವಿತ ಬಂದು ಕೈ ಹಿಡಿದು ಎಳೆಯತೊಡಗಿದಳು. ನಾನು ಕಣ್ಣರಳಿಸಿ "ಎಲ್ಲಿ ?" ಎಂದೆ. "ಇಲ್ಲೆ ಕುತ್ಕೊಂಡು ಎಲ್ಲಿಂದ್ರೆ ಹೇಗೆ ಕಾಣ್ಸುತ್ತೆ? ಬೇಗ ಎದ್ಬಾ ಸ್ವಲ್ಪ ತಡವಾದ್ರು ಆ ಪ್ರಾಣಿ ಗುಹೆಯೊಳಕ್ಕೆ ನುಸುಳಿಬಿಡುತ್ತೆ......" ಸವಿ ನನ್ನ ಹೆಚ್ಚುಕಮ್ಮಿ ಎಳೆದುಕೊಂಡೇ ಹೊರಟಳು. ನಾವು ವರಾಂಡದೊಳಕ್ಕೆ ಕಾಲಿಡುವುದಕ್ಕೂ ಸವಿ ಹೇಳಿದ ಆ ಪ್ರಾಣಿ ನಮ್ಮನೆ ಮುಂದೆ ಹಾಯುವುದಕ್ಕೂ ಸರಿಹೋಯ್ತು. ನಾವು ಕಿಟಕಿಯಿಂದ ಇಣುಕುತ್ತಿರುವಂತೆಯೇ ನಮ್ಮನೆಯ ಎದುರು ಮನೆಯಿಂದ ಎಡಕ್ಕಿದ್ದ ಎರಡನೆ ಮನೆಯ ಮುಂದೆ ನಿಂತು, ಗೇಟು ತೆರೆದು ಒಳನಡೆದು ಕಾಲಿಂಗ್‌ಬೆಲ್ ಮೇಲೆ ಬೆರಳಿರಿಸಿತ್ತು ಆ ಪ್ರಾಣಿ. ಕೆಲವೇ ಕ್ಷಣಗಳಲ್ಲಿ ಆ ಮನೆಯ ಬಾಗಿಲು ತೆರೆಯಿತು. ತೆರದ ವ್ಯಕ್ತಿ ನಮಗೆ ಕಾಣಿಸಲಿಲ್ಲ ಆದರೆ ಹೊರಗಿನ ಪ್ರಾಣಿ ಒಳನುಸುಳಿದ್ದು ಸ್ಪಷ್ಟವಾಗಿ ಕಾಣಿಸಿತು. ಹಿಂದೆಯೇ ಬಾಗಿಲು ಮುಚ್ಚಿದಾಗ "ಹದಿನೈದು ದಿವಸ ಎಲ್ಲಿ ನಾಪತ್ತೆ ಆಗಿತ್ತೊ? ಬಹುಶಃ ಬೇರೆಲ್ಲಿಯಾದ್ರು ಕಾಂಟ್ರಕ್ಟ್ ಇತ್ತೊ ಏನೋ......" ಸವಿ ಕುಚೇಷ್ಟೆ ದನಿಯಲ್ಲಿ ಹೇಳಿದಳು. "ಎಲ್ಲಿ ಹಾಳಾಗೋಗಿದ್ನೊ ಮತ್ತೆ ಪ್ರತ್ಯಕ್ಷ ಆಗಿದ್ದಾನೆ......" ಎಂದೆ ನಾನು. ನಮ್ಮ ತಲೆಗಳನ್ನು ಕಿಟಕಿಯಿಂದ ಒಳಕ್ಕೆಳೆದುಕೊಂಡು ಮಹಡಿ ಏರಿದೆವು. ಮೇಲೆ ರೂಂನಲ್ಲಿ ಎಲ್ಲಾ ಕಿಟಕಿಗಳನ್ನು ತೆರೆದು ಆ ಮನೆ ಸರಿಯಾಗಿ ಕಾಣುವಂತೆ ಇಬ್ಬರೂ ಕುರ್ಚಿ ಎಳೆದುಕೊಂಡು ಆ ಪ್ರಾಣಿಯಿಂದು ಎಷ್ಟೊತ್ತಿಗೆ ವಾಪಸ್ಸು ಬರುವುದೋ ಎಂಬ ಕುತೂಹಲದಿಂದ ಕುಳಿತೆವು. ಟೈಂಪಾಸ್ ಮಾಡಲು ಕೇರಂ ಆಡಲು ನಿರ್ಧರಿಸಿ, ಪಾನ್ಸ್ ಜೋಡಿ

ಸುತ್ತಿದ್ದಾಗಲೇ ಆ ಮನೆಯ ಗೇಟು ಶಬ್ದವಾಗಿ ಸರಕ್ಕನೆ ಎದ್ದು ನೋಡಿದರೆ ಆ ಪ್ರಾಣಿ ಗೇಟು ತೆರೆದುಕೊಂಡು ಹೊರಬರುತ್ತಿದೆ.

"ವಾಟ್ ಎ ಸರ್‌ಪ್ರೈಸ್! ಹೋಗಿನ್ನು ಹತ್ತು ನಿಮಿಷ ಕೂಡ ಆಗಿಲ್ಲ ಆಗ್ಲೆ ವಾಪಸ್ಸು ಬರ್‍ತಿದ್ದಾನೆ......!" ನಾನು ಆಶ್ಚರ್ಯದಿಂದ ಉದ್ಗರಿಸುತ್ತಿದ್ದಂತೆ ಆ ಪ್ರಾಣಿ ನಮ್ಮನೆಯನ್ನು ಸಮೀಪಿಸಿತ್ತು. "ಏನಿಲ್ಲಾಂದ್ರು ಒಂದೂರು ರೌಂಡಾದ್ರು ಮುಗ್ಸಿ ಬರ್‍ಬಹ್ದು ಅಂದ್ಕೊಂಡಿದ್ರೆ ಇದೇನು ಹೀಗೆ......? ಏನೋ ಎಡವಟ್ಟಾಗಿದೆ ಕಣೇ....." ಸವಿ ಹೇಳಿದಾಗ ಇಬ್ರೂ ಜೋರಾಗಿ ನಕ್ಕೆವು. ನಮ್ಮ ನಗು ಕೇಳಿಸಿತೇನೋ ಹಿಂದಕ್ಕೆ ತಿರುಗಿ ನೋಡಿತು. ನಾವು ಕೆಳಗಿಳಿದು, ಬಾಗಿಲು ತೆರೆದು ಹೊರಬಂದಾಗ ಆಗಲೇ ಬೀದಿಯ ತಿರುವಿನಲ್ಲಿತ್ತು. ನಮ್ಮನ್ನು ನೋಡಿದ್ದೆ ಎದುರುಮನೆಯ ವಿಮಲ ಆಂಟಿಯೂ ಹೊರಬಂದರು. "ಏನ್ ಆಸಾಮಿ ದಿಢೀರ್ ಅಂತ ಪ್ರತ್ಯಕ್ಷ ಆಗಿ ದಿಢೀರಂತ ಮಾಯ ಆಗ್ಬಿಟ್ನಲ್ಲಾ....." ಆಂಟಿ ನಗುತ್ತ ಅಂದಾಗ "ಅಯ್ಯೊ ಅವ್ನು ಪ್ರತ್ಯಕ್ಷ ಆಗಿದ್ದು ಮಾಯ ಆಗಿದ್ದು ಮುಖ್ಯ ಅಲ್ಲ ಆಂಟಿ ಹತ್ತೇ ನಿಮಿಷದಲ್ಲಿ ಮಾಯವಾಗಿದ್ದು ಮುಖ್ಯ...." ಎಂದು ಸವಿ ಅದು ಹೋದ ದಿಕ್ಕನ್ನೆ ನೋಡುತ್ತ "ಅಲ್ಲಾ ಹದಿನೈದು ದಿನದ ಹಿಂದೆ ನಿತ್ಯ ಬರೋವಾಗ್ಲೇ ಹೊರಬರೋದು ಎರಡೂರು ಗಂಟೆಯಾಗಿರೋದು..... ಈಗ ಹದಿನೈದು ದಿನದ gap ಆದ್ಮೇಲೂ ಕನಿಷ್ಠ ಅಂದ್ರೆ ಆರೇಳು ಗಂಟೇನಾದ್ರೂ ಇರ್‍ಬೇಕಿತ್ತು......" ಸವಿ ಕಣ್ಣೊಡೆದು ಹೇಳಿದಾಗ ವಿಮಲ ಆಂಟಿ ಕಣ್ಣಗಲಿಸಿ "ಎಯ್ ಹುಡ್ಗಿ ಬಹಳ ಜೋರಾಗ್ತಿದ್ದೀ....." ಎಂದರು ನಗುತ್ತ. ನಾವು ನೋಡುತ್ತಿದ್ದಂತೆಯೇ ನಮ್ಮ ಬೀದಿಯಲ್ಲಿ ಅಲ್ಲಲ್ಲಿ ನಮ್ಮಂತೆ ನಾಲ್ಕೈದು ಗುಂಪುಗಳು ಸೃಷ್ಟಿಯಾದವು. ನಾವು ಮಾತಾಡುತ್ತಿದ್ದ ವಿಷಯವೇ ಅಲ್ಲಿಯೂ ಚರ್ಚಿತವಾಗುತ್ತಿರುವುದರಲ್ಲಿ ಯಾರಿಗೂ ಸಂಶಯವಿರಲಿಲ್ಲ. "ನಾನೆಲ್ಲೊ ಗುಡ್‌ಬೈ ಹೇಳಿರಬೇಕು ಅಂದ್ಕೊಂಡಿದ್ದೆ........" "ಅಯ್ಯೊ ಅಷ್ಟು ಸುಲಭ ಅಲ್ಲಮ್ಮ ಅದು ಬಿಡೋದು...." "ಹೌದಾ ಆಂಟಿ ಅದು ಬಿಡೋದು ಅಷ್ಟು ಸುಲಭ ಅಲ್ವಾ.......?!" ಅಲ್ಲಾ ಎಲ್ಲರಿಗೂ ಗೊತ್ತಾಗಿರೋವಾಗ ಆ ಮನೆಯೋರಿಗೆ ಗೊತ್ತಾಗಿರಲ್ವಾ.....? so wonder ಅಲ್ವಾ? ನಮ್ಮ ಮಾತುಗಳು ಆ ವಿಷಯದ ಸುತ್ತಲೇ ಹರಿದಾಡುತ್ತಿದ್ದವು. ನಿಜವಾಗಿಯೂ ಎಲ್ಲರಿಗೂ ಇದೊಂದು ಬಿಡಿಸದ ಒರಟಾಗಿತ್ತು. ಈ ಪ್ರಾಣಿ ಈ ಬೀದಿಯಲ್ಲಿ ಕಾಣಿಸಲು ತೊಡಗಿ ಎರಡು ವರ್ಷಗಳಾಗುತ್ತ ಬಂದಿತ್ತು. ಆದರೆ ಎರಡು ವಾರಗಳ ಕಾಲ ನಾಪತ್ತೆಯಾದದ್ದು ಇದೇ ಮೊದಲು. ನನ್ನ ಮನಸ್ಸು ಎರಡು ವರ್ಷಗಳ ಹಿಂದಕ್ಕೋಡಿತು.

ಆ ಮನೆಯ ಮಾಲೀಕರು ಮುತ್ತಣ್ಣನವರು. ಸುಮಾರು ನಲವತ್ತೈದರ ಅಂಚಿನಲ್ಲಿದ್ದರೂ ಒಳ್ಳೆ ಮೂವತ್ತೈದರ ಮೈಕಟ್ಟು. ಅವರ ಹೆಂಡತಿ ಲೀಲಾವತಿ. ಮುತ್ತಣ್ಣನವರಿಗೆ ಹೇಳಿಮಾಡಿಸಿದ ಜೋಡಿ. ಇಬ್ಬರು ಮುದ್ದಾದ ಮಕ್ಕಳು ರವಿ, ಕಿರಣ್. ಒಟ್ಟಲ್ಲಿ ಅದೊಂದು ಸುಂದರ ಸಂಸಾರ. ಲೀಲಾವತಿ, ನಮಗೆಲ್ಲ ಲೀಲಕ್ಕ

ಸ್ನೇಹಜೀವಿ. ತುಂಬಾ ರೂಪವಂತೆ. ಬೆಳಗ್ಗಿನಿಂದ ಸಂಜೆ ಮಕ್ಕಳು ಮನೆಗೆ ಹಿಂದಿರುಗುವವರೆಗೆ ಲೀಲಕ್ಕ ಫ್ರೀ. ಆ ಸಮಯದಲ್ಲಿ ನಿಟ್ಟಿಂಗ್ಗೋ ಇಲ್ಲ ಪೇಂಟಿಂಗೋ ಮಾಡುತ್ತಿದ್ದರು. ಎಲ್ಲರೊಡನೆ ಬೇಗ ಹೊಂದಿಕೊಂಡರೂ ನನ್ನೊಡನೆ ಅವರ ಒಡನಾಟ ಜಾಸ್ತಿ. ಶ್ರೀಮಂತಿಕೆಯಿದ್ದರೂ ಸರಳ ಸ್ವಭಾವದ ಆಕೆ ಬೀದಿಯವರಿಗೆಲ್ಲಾ ಮೆಚ್ಚಿನವರಾದರು. ನಾನಂತು ಅವರನ್ನು ಸ್ವಂತ ಅಕ್ಕನಂತೆ ಕಾಣುತ್ತಿದ್ದೆ. ಹೊರಗೆ ಹೋಗುವಾಗಲೆಲ್ಲಾ ನಾನೇ ಅವರಿಗೆ ಜತೆ. ರಾತ್ರಿ ಹನ್ನೆರಡರತನಕ ಅವರೊಡನೆ ಹರಟೆ ಹೊಡೆಯುತ್ತಿದ್ದೆ. ಮುತ್ತಣ್ಣ ಊರಲ್ಲಿ ಇರುತ್ತಿದ್ದುದೇ ಅಪರೂಪ. ಯಾವಾಗಲೂ ಮನೆಗೆ ಬರುವಾಗ ಹನ್ನೆರಡಾಗುತ್ತಿತ್ತು. ಅವರಿಬ್ಬರು ಕೂಡಿ ಹೊರಹೋಗಿದ್ದನ್ನು ನೋಡಿದ್ದೆ ಅಪರೂಪ. ಅವರ ಮನೆಗೆ ಬೇರೆ ಸ್ನೇಹಿತರಾಗಲಿ, ಸಂಬಂಧಿಗಳಾಗಲಿ ಬಂದಿದ್ದನ್ನೂ ನಾವು ಕಾಣೆವು. ಆದರೆ ಇದ್ದಕ್ಕಿದ್ದಂತೆ ಈ ಪ್ರಾಣಿ ಎಲ್ಲಿಂದಲೋ ಪ್ರತ್ಯಕ್ಷನಾದ. ಲೀಲಕ್ಕ ನನ್ನೊಂದಿಗೆ ದೂರದ ಸಂಬಂಧಿ ಎಂದು ಹೇಳಿದ್ದರು. ನಾವು ನೋಡಿದ ಆ ಮನೆ ಪ್ರವೇಶಿಸಿದ ಮೊದಲ ಸಂಬಂಧಿ ಅವನೇ. ನೋಡಲು ಲಕ್ಷಣ ಅಂತಲೂ ಹೇಳಲಾಗದೆ, ತೆಳ್ಳಗೆ ಬಳುಕುತ್ತ, ಉದ್ದಕ್ಕಿದ್ದ ಮನುಷ್ಯ ಮೊದಮೊದಲಿಗೆ ತಿಂಗಳಿಗೊಮ್ಮೆ ಎರಡು ಬಾರಿ ಬರುತ್ತಲ್ಲಿದ್ದ. ಆದರೆ ಬರುಬರುತ್ತ ನಿತ್ಯ ಕಾಣಸತೊಡಗಿದ. ಆತ ಮನೆಯಲ್ಲಿರುವ ಸಮಯ ಲೀಲಕ್ಕ ಹೊರಗೇ ಬರುತ್ತಿರಲಿಲ್ಲ. ಅವನು ಹೋದನಂತರವೇ ಬರುತ್ತಿದ್ದುದು. ಆತನ ನಿತ್ಯದರ್ಶನ ನಮಗೆ ಲಭ್ಯವಾದಂತೆ ನಮ್ಮ ನೆಚ್ಚಿನ ಲೀಲಕ್ಕನ ದರ್ಶನ ಅಪರೂಪವಾಗತೊಡಗಿತ್ತು. ಆತ ಯಾವಾಗಲೂ ಯಾರೂ ಇಲ್ಲದ ಸಮಯದಲ್ಲೆ ಬಂದು ಹೋಗುತ್ತಿದ್ದು, ಅವನ ಈ ತೆರನ ವರ್ತನೆ ಬೀದಿಯವರೆಲ್ಲರ ಅನುಮಾನಕ್ಕೆ ಎಡೆಯಾಯ್ತು. ಕೆಲವರಾಗಲೇ ಅವರೊಂದಿಗೆ ಮಾತನಾಡುವುದನ್ನೇ ಬಿಟ್ಟಿದ್ದರು. ಆದರೆ ಅಪರೂಪಕ್ಕೆ ಹೊರಬಂದಾಗಲು ನನ್ನೊಡನೆ ಎಂದಿನಂತೆ ಸ್ನೇಹದಿಂದ ಮಾತಾಡುತ್ತಲಿದ್ದರು. ನಮಗೆ ತಿಳಿದಂತೆ ಈ ಮನುಷ್ಯ ಮುತ್ತಣ್ಣನವರನ್ನು ಭೇಟಿಯಾದಂತೆ ಇರಲಿಲ್ಲ. ಅವರಿಲ್ಲದ ಸಮಯದಲ್ಲೇ ಅವನು ಬರುತ್ತಿದ್ದುದು ಸಹಜವಾಗಿ ಎಲ್ಲರ ಕುತೂಹಲ ಹೆಮ್ಮರವಾಗಿ ಅನುಮಾನ ಮೊಳಕೆಯೊಡೆದಿತ್ತು. ನಾನು ಎಷ್ಟೊ ಬಾರಿ ಈ ಬಗ್ಗೆ ಅವರನ್ನ ಕೇಳಬೇಕೆಂದು ಪ್ರಯತ್ನಿಸಿ, ಸಂಕೋಚದಿಂದ ಸೋತು ಹೋಗಿದ್ದೆ. ನಾನು ಅವರೊಡನೆ ಬೆರೆಯುವ ಬಗ್ಗೆ ಅಮ್ಮನಾಗಲೇ ಅಸಮಾಧಾನ ವ್ಯಕ್ತಪಡಿಸುತ್ತಿದ್ದಳು. ನಾನು ಆಕೆಯೊಡನೆ ಮಾತಾಡಿ ಬಂದೆನೆಂದರೆ ಸಿಡುಕ ತೊಡಗುತ್ತಿದ್ದಳು. ಸವಿ, ವಿಮಲ ಆಂಟಿ ಎಲ್ಲರೂ ಅಮ್ಮನಿಗೆ ಸಪೋರ್ಟ್. ಆದರೆ ನನಗ್ಯಾಕೋ ಲೀಲಕ್ಕನ ಬಗ್ಗೆ ಒಳ್ಳೆಯ ಅಭಿಪ್ರಾಯ ಇನ್ನೂ ಇತ್ತು. ಆದರೆ ನನ್ನ ಅಭಿಪ್ರಾಯವೂ ಬದಲಾಗುವಂತಹ ಘಟನೆಯೊಂದು ಶುಕ್ರವಾರದ ಮಧ್ಯಾಹ್ನ ನಡೆದು ನಾನು ಯಾವುದನ್ನು ಸುಳ್ಳೆಂದು ಸಾಧಿಸಬೇಕೆಂದು ಅಂದುಕೊಂಡಿದ್ದೇನೊ ಅದು ನಿಜವಾಗಿ, ದೃಢಪಟ್ಟಿತ್ತು. ಅಂದು ನಾನು, ಆಂಟಿ ನಡುಮನೆಯಲ್ಲಿ ಮಾತನಾಡುತ್ತಿದ್ದಾಗ ಮಹ

ಡಿಯ ರೂಂನಲ್ಲಿದ್ದ ಸವಿ ಜೋರಾಗಿ "ಸುಜೀ...... ಆಂಟಿ....." ಎಂದು ಕೂಗಿದಳು. ನಾವು ಮೇಲಕ್ಕೆ ಹೋಗಿ ನೋಡಿದಾಗ ಎಂದೂ ಮಧ್ಯಾಹ್ನ ಮನೆಗೆ ಬಾರದ ಮುತ್ತಣ್ಣ ಇಂದು ಕಾಲಿಂಗ್‌ಬೆಲ್ ಒತ್ತುತ್ತಾ ನಿಂತಿದ್ದರು. ಆ ಸಮಯ ದಲ್ಲಿ ಆತ ಒಳಗಿದ್ದ. ಸವಿ ಒಮ್ಮೆಲೇ ಏಣಿಯೇರಿ ಟೆರೆಸ್ ಏರಿದಳು. ನಾವೂ ಆಕೆಯನ್ನು ಹಿಂಬಾಲಿಸಿದೆವು. ನಮ್ಮ ಮನೆಯ ಟೆರೆಸ್ ಮೇಲಿನಿಂದ ಎದುರು ಮನೆಗಳ ಹಿತ್ತಲು, ಹಿಂದಿನ ಸಾಲು ಚೆನ್ನಾಗಿ ಕಾಣುತ್ತಿದ್ದವು. ನಾವು ನೋಡುತ್ತಿ ರುವಂತೆಯೇ ಆತ ಆ ಮನೆಯ ಹಿತ್ತಲಿಂದ ಹೊರಬಿದ್ದು ಹೋಗುತ್ತಿರುವುದು ಕಂಡಿತು. ಸವಿ ಜೋರಾಗಿ ಶಿಳ್ಳೆ ಹಾಕಿದಳು. ಮರುಕ್ಷಣವೇ ಮುಂದಿನ ಬಾಗಿಲು ತೆರೆದು, ಮುತ್ತಣ್ಣ "ಯಾಕಿಷ್ಟು ಹೊತ್ತು......?" ಎಂದು ಒಳಹೋದದ್ದು ಒಟ್ಟಿಗೇ ನಡೆದವು. ಪೆಚ್ಚಾಗಿ ನಿಂತಿದ್ದ ನನ್ನನ್ನು ನೋಡಿ "ನೀನ್ಯಾಕೆ ಹೀಗೆ ಮುಖ ಸಣ್ಣಗೆ ಮಾಡ್ಕೊಂಡಿದ್ದಿ.....? ಸಾಕ್ಷಿಸಮೇತ ನಿನ್ನ ಲೀಲಕ್ಕನ ವ್ಯಭಿಚಾರನ ಹಿಡಿದುಕೊಟ್ಟಿದ್ದೀನಿ ನೋಡು. ಅವರಿಬ್ಬರ ಮಧ್ಯೆ ಏನೋ ಅನೈತಿಕವಾದ್ದು ನಡೆಯುತ್ತಿದೆ ಎಂಬುದನ್ನ ಈಗಲಾದರೂ ಒಪ್ಕೋತಿಯಾ......?" ಸವಿ ಕೇಳು ತ್ತಿದ್ದಳು. ಲೀಲಕ್ಕನ ಬಗೆಗಿದ್ದ ಒಳ್ಳೆಯ ಭಾವನೆಗಳು ಪುರ್ರನೆ ಹಾರಿಹೋಗಿದ್ದವು. "ಇಂಥವ್ರಿಗಿಂತ ರೆಡ್‌ಲೈಟ್ ಏರಿಯಾದೋರೇ ವಾಸಿ. ಅವರಾದ್ರೆ ಯಾವ್ದೊ ಒತ್ತಡಕ್ಕೆ, ಬಲವಂತಕ್ಕೆ ಸಿಕ್ಕು ಆ ದಾರಿಗಿಳಿದಿರ್ತಾರೆ....." ಸವಿ, ಆಂಟಿ ಇಬ್ಬರೂ ಸೇರಿ ಅವಳ ಜಾತಕ ಜಾಲಾಡುತ್ತಿದ್ದರು.

ಸವಿಯ ಈ ಸಂಶೋಧನೆ ಇಡೀ ಬೀದಿಗೆ ತಿಳಿಯುವುದು ತಡವಾಗಲಿಲ್ಲ. ಹೀಗಾಗಿ ಬೀದಿಯ ನಾಲಿಗೆ ಉದ್ದವಾಗಿತ್ತು. ಅಂದಿನಿಂದ ನಾನು ಅಪ್ಪಿತಪ್ಪಿಯೂ ಅವರ ಮನೆಯತ್ತ ತಲೆಹಾಕಲಿಲ್ಲ. ಅವರಾಗಿಯೇ ಮಾತನಾಡಿಸಲು ಬಂದಾ ಗಲೂ ಮುಖ ತಿರುವಿದ್ದೆ. ಅಪರೂಪಕ್ಕೆ ಆಕೆಯೇನಾದರೂ ಹೊರಗೆ ನಿಂತಲ್ಲಿ ಸವಿ "ಏನ್ ಆಂಟಿ ಇವೊತ್ತು ಆರಾಮಾಗಿ ಹೊರಗ್ಬಂದಿದ್ದೀರಿ? ಇವತ್ತು ರಜಾನ?" "ಆಂಟಿ ಇವತ್ತು ಎಷ್ಟು ರೌಂಡೂ....." ಎಂದೋ ವಿಮಲ ಆಂಟಿಗೆ ಅನ್ನುವಂತೆ ಪರೋಕ್ಷವಾಗಿ ಆಕೆಯನ್ನೆ ತನ್ನ ವ್ಯಂಗ್ಯದಿಂದ ಇರಿದಾಗ ಸರಕ್ಕನೆ ಒಳಗೋಗಿಬಿಡುತ್ತಿದ್ದಳಾಕೆ. ಆ ಮನುಷ್ಯ ಬರುವಾಗ ಅದೆಷ್ಟು ಬಾರಿ 'ಥೂ.....' ಎಂದು ಉಗಿದಿರುವಳೋ...... ಆದರೆ, ಆತ ತಗ್ಗಿಸಿದ ತಲೆಯನ್ನು ಆ ಮನೆ ಮುಂದೆ ನಿಂತಾಗಲೇ ಎತ್ತುತ್ತಿದ್ದು. ಹೀಗೆ ನಿಲ್ಲದೆ ನಡೆಯುತ್ತಿದ್ದ ಭೇಟಿ ಇದ್ದಕ್ಕಿದ್ದಂತೆ ಹದಿನೈದು ದಿವಸ ನಿಂತಾಗ ನಾವೆಲ್ಲ ಮುಗಿಯಿತೆಂದು ತಪ್ಪು ಭಾವಿಸಿದ್ದೆವು.

ಈ ಮಧ್ಯೆ ಅಪ್ಪ ನಮ್ಮಿಬ್ಬರಿಗೂ ವರಾನ್ವೇಷಣೆಯಲ್ಲಿ ತೊಡಗಿದ್ದರು. ಸವಿಯಲ್ಲಿ ಅದೇನು ಆಕರ್ಷಣೆ ಇತ್ತೊ ಬಂದ ಗಂಡುಗಳೆಲ್ಲ ಆಕೆಯನ್ನೇ ಬಯಸುತ್ತಿದ್ದರು. ನಾಲ್ಕೈದು ಹೀಗೇ ಆದನಂತರ ನನಗೆ ಮದುವೆಯ ಬಗೆಗಿದ್ದ ಕನಸು ಕರಗತೊಡಗಿ, ಸವಿಯ ಮದುವೆ ಮುಗಿಸಲು ಅಪ್ಪಅಮ್ಮನಿಗೆ ಹೇಳಿ;

ಊಟ ನೀರು ಬಿಟ್ಟು ಕಡೆಗೂ ಎಲ್ಲರನ್ನು ಒಪ್ಪಿಸಿದಾಗ ಶೇಖರ್ ಎಂಬ ಬ್ಯಾಂಕ್ ಉದ್ಯೋಗಿ ಸವಿಯ ಗಂಡನಾಗಿ ಬಂದ. ಗಂಡನ ಮನೆಗೆ ತೆರಳುವ ಮುನ್ನ "ವಾರಕ್ಕೊಂದು ಪತ್ರ ಬರೆ, ಅದರಲ್ಲಿ ಆ ಪ್ರಾಣಿಯ ಬಗ್ಗೆ ವರದಿ ಮಾಡುವುದನ್ನು ಮರೆಯಬೇಡ....." ಎಂದು ನಗುತ್ತ ಹೇಳಿದ್ದಳು. ಆಡಾಡುತ್ತಲೇ ಸವಿ ಗಂಡನ ಮನೆಗೆ ಹೋಗಿ ವರ್ಷವಾಗುತ್ತ ಬಂದಿತ್ತು. ಆಕೆಯಿಲ್ಲದ ಮನೆ ಬೋಳು ಬೋಳೆನಿಸುತ್ತಿತ್ತು ನನಗೆ. ಅವಳು ಎಷ್ಟು ಮಾತುಗಾರ್ತಿಯೊ ಅವಳ ಗಂಡ ಅಷ್ಟೇ ಮಿತಭಾಷಿ. ಯಾರೊಡನೆಯೂ ಹೆಚ್ಚು ಬೆರೆಯುತ್ತಿರಲಿಲ್ಲ. ತಾನಾಯಿತು ತನ್ನ ಪಾಡಾಯ್ತು. ವರ್ಷಗಳುರುಳಿದಂತೆ ಸವಿಯ ಜೀವನದಲ್ಲಿ ಅನೇಕ ಬದಲಾವಣೆಗಳಾದವು. ಸುರೇಶ್, ಸತೀಶ್ ಎಂಬ ಇಬ್ಬರು ಮಕ್ಕಳು ಆಕೆಯ ಮಡಿಲನ್ನು ತುಂಬಿದರು. ಸವಿ ತೌರಿಗೆ ಬರುತ್ತಿದ್ದುದೇ ಅಪರೂಪ. ಇತ್ತೀಚೆಗೆ ಅವಳಿಂದ ಪತ್ರವೂ ಅಪರೂಪವಾಗಿತ್ತು. ಮನೆಕೆಲಸ, ಮಕ್ಕಳ ನಡುವೆ ಸಮಯ ಸಿಗಲಾರದೆಂದು ನಾನೇ ಆಗಾಗ ಪತ್ರ ಬರೆಯುತ್ತಿದ್ದೆ. ಮರೆಯದೆ ಅವಳ ಈ ಪ್ರಾಣಿಯ ಡಿಟೇಲ್ಸ್ ತಿಳಿಸುತ್ತಿದ್ದೆ.

ಎಂದಿನಂತೆ ಇಂದೂ ಕೂಡ ಅಡುಗೆಯ ತಯಾರಿಯಲ್ಲಿದ್ದೆ. ಮನೆಯ ಮುಂದೆ ಆಟೋ ನಿಂತ ಶಬ್ದ ಕೇಳಿಸಿತು. ಹೊರಬಂದು ನೋಡಿದರೇ ಸವಿ ತನ್ನ ಪರಿವಾರದೊಂದಿಗೆ ನಿಂತಿದ್ದಾಳೆ! ಅವಳ ಅನಿರೀಕ್ಷಿತ ಆಗಮನ ನನ್ನ ಸಂತೋಷವನ್ನು ದ್ವಿಗುಣಗೊಳಿಸಿತ್ತು. ಸವಿಯೇಕೋ ತುಂಬಾ ಸೊರಗಿದ್ದಳು. ಮುಖದಲ್ಲಿಯೂ ಎಂದಿನ ಕಳೆಯಿರಲಿಲ್ಲ. ಮಕ್ಕಳು ಅಜ್ಜ ಅಜ್ಜಿಯನ್ನು ಸೇರಿಬಿಟ್ಟಿದ್ದರು. ಬಹಳ ದಿನಗಳ ನಂತರ ಬಂದ ಸವಿಯ ಬಳಿ ಮಾತನಾಡಲು ಸಾಕಷ್ಟು ವಿಷಯವಿತ್ತು. ಆದರೆ ಶೇಖರ್ ಇದ್ದುದರಿಂದ ಒಂಟಿಯಾಗಿ ಸಿಕ್ಕಲಿಲ್ಲ ಸವಿ. ಒಂದು ವಾರ ಕಳೆದದ್ದೇ ತಿಳಿಯದಾಯ್ತು. ಆಕೆ ಹೊರಡುವ ಭಾನುವಾರ ಸಮೀಪಿಸುತ್ತಿತ್ತು. ನಾನಾಕೆಯನ್ನು ಇನ್ನೊಂದು ವಾರ ಹೇಗೆ ನಿಲ್ಲಿಸಿಕೊಳ್ಳುವುದು ಎಂಬ ಯೋಚನೆಯಲ್ಲಿ ಮುಳುಗಿದ್ದೆ. ಎದುರು ಮನೆಯ ಆ ಪ್ರಾಣಿಯ ಬಗ್ಗೆ ಸವಿ ಕೇಳುವಳೇನೋ ಎಂಬ ನನ್ನ ಕಾತರ ಹುಸಿಯಾಗಿ ಅವಳದರ ಬಗ್ಗೆ ಚಕಾರವೆತ್ತಿರಲಿಲ್ಲ. ಇತ್ತೀಚೆಗೆ ಆ ಮನುಷ್ಯ ಯಾವಾಗಲಾದರೊಮ್ಮೆ ಬಂದು ಹೋಗುತ್ತಿದ್ದ. ಸವಿಗೆ ಅದರ ಬಗ್ಗೆ ತಿಳಿಸಲಾಗಲೇ ಇಲ್ಲ. ಅವಳ ಗಂಡನೆದುರು ಈ ಬಗ್ಗೆ ಮಾತನಾಡುವ ಧೈರ್ಯ ನನಗಿರಲಿಲ್ಲ. ನಾನು ಬಯಸಿದಂತೆಯೇ ಸವಿ ಅದೇಗೋ ಶೇಖರ್‌ನನ್ನು ಒಪ್ಪಿಸಿ, ಇನ್ನೊಂದು ವಾರ ಇರುವ ಮನಸ್ಸು ಮಾಡಿದ್ದಳು. ರಾತ್ರಿ ಶೇಖರ್ ಮಕ್ಕಳೊಡನೆ ಊರಿಗೆ ಹಿಂದಿರುಗಿದರು. ಹೀಗಾದರೂ ಸವಿಯ ಹಿಂದಿನ ತುಂಟು ಮಾತುಗಳನ್ನು ಕೇಳಬಹುದೆಂದು ನಾನು ಖುಷಿಯಿಂದ ಅವುಗಳ ನಿರೀಕ್ಷಣೆಯಲ್ಲಿದ್ದೆ.

ಅಂದು ಮಹಡಿಯ ಆ ಕೋಣೆಯಲ್ಲಿ ಕುಳಿತು ಕೇರಂ ಆಡಲು ನಿರ್ಧರಿಸಿದೆವು ನಾವಿಬ್ಬರೂ. "ಸೆಕೆ ಕಣೇ ಕಿಟಕಿ ತಗಿ....." ಆಕೆ ಎಂದಾಗ ನಾನು ನಗುತ್ತ

"ಓಹೋ ಸೆಕೆನಾ.....!" ಎಂದು ಕಿಟಕಿಗಳನ್ನೆಲ್ಲ ತೆರೆದೆ. ಅಂದೇ ಆತ ಪ್ರತ್ಯಕ್ಷ ನಾಗಬೇಕೆ......? "ಸವೀ....... ಎಂತಹ ಸಮಯಕ್ಕೆ ಕಿಟಕಿ ತೆರೆಸಿದಿಯಲ್ಲೇ......" ಎಂದೆ ಅವಳ ಬಾಯಿಂದ ಹೊರಡುವ ಮಾತುಗಳನ್ನು ಕೇಳಲು ಕಾತುರಳಾಗಿ. ಆದರೆ ಸವಿ ಯೇಕೋ ತುಂಬಾ ಗಂಭೀರವಾಗಿದ್ದಳು. ಸ್ವಲ್ಪವೂ ನಗುವಿಲ್ಲ. ಮಾತೂ ಇಲ್ಲ. ಒಂದೇ ಸಮ ಆ ಮನೆಯತ್ತಲೇ ದಿಟ್ಟಿಸುತ್ತಿದ್ದಳು. ಅವಳ ಈ ವರ್ತನೆ ತೀರಾ ಹೊಸದು. ಆಕೆಯನ್ನು ಅಲುಗಿಸಿ ಕೇಳಿದೆ "ಸವಿ ಯಾಕ್ ಹಾಗೆ ನೋಡ್ತಿದ್ದಿ......." ಕನಸಿನಿಂದ ಎಚ್ಚೆತ್ತವಳಂತೆ ಬೆಚ್ಚಿಬಿದ್ದು "ಹಾಂ......!" ಎಂದಳು. "ಸುಜೀ ನಿನ್ನ ಆ ಲೀಲಕ್ಕ ರಿಯಲೀ ಗ್ರೇಟ್ ಕಣೇ..... ಈ ಮನುಷ್ಯ, ಆಕೆ ಇಬ್ರೂ ತುಂಬಾ ಧೈರ್ಯವಂತರು....." ಸವಿಯ ಈ ಮಾತುಗಳಿಂದ ಆದ ಆಘಾತಕ್ಕೆ ನಾನು ಮೂರ್ಛೆ ಹೋಗದಿದ್ದುದು ಹೆಚ್ಚು. ಇವಳಿಗೆ ಲೀಲಕ್ಕನ ಬಗ್ಗೆಯಿದ್ದ ತಿರಸ್ಕಾರ ಎಷ್ಟೆಂದು ನನಗಿಂತ ತಿಳಿದವರಾರು. ಆಕೆಯನ್ನು ನೋಡಿ ದರೇ ಹೇಸಿಗೆಯನ್ನು ಕಂಡಂತೆ ಅಸಹ್ಯಸುತ್ತಿದ್ದಳು. ಚಡಪಡಿಸುತ್ತಿದ್ದಳು. "ಯಾಕ್ ಸವಿ? ಹುಷಾರಿಲ್ವಾ......?" ನಾನು ನಿಜವಾಗಿಯೂ ಗಾಬರಿಗೊಂ ಡಿದ್ದೆ. "ಆಕೆ ಹೆಸರೆತ್ತಿದರೇ ಹೇಸಿಗೆ ಅಂತಿದ್ದೆ....... ಈಗ ನೋಡಿದ್ರೆ ಗ್ರೇಟ್ ಅಂತಿಯಾ.....? ದೇವ್ರಂಥ ಗಂಡ, ಮುತ್ತಿನಂತಹ ಮಕ್ಳು ಇದ್ದೂ ಬೇರೆ....." "ಇಲ್ಲ ಸುಜೀ...." ಸವಿ ನನ್ನ ಮಾತುಗಳನ್ನು ತಡೆದಳು. "ಆಕೆಗೆ ತೀರ ಅವಶ್ಯವಾದ ಸುಖ, ಸಂತೋಷಗಳು ತನ್ನ ಮನೇಲೇ ಹೇರಳವಾಗಿ ದೊರಕಿದ್ದಿದ್ರೆ ಇನ್ನೊಬ್ಬರತ್ತ ನೋಡೊ ಅವಶ್ಯಕತೆಯೇ ಇರುತ್ತಿರಲಿಲ್ಲ. ಇಡೀ ಬೀದಿ ಅವ್ರ ಬಗ್ಗೆ ಮಾತಾಡ್ತಿದ್ರೂ ದೇ ಜಸ್ಟ್ ಡೋಂಟ್ ಕೇರ್....... ನಿಜವಾಗಿಯೂ ಅವರದ್ದು ಗಟ್ಸ್ ಬಿಡು...... ಸವಿಯ ಮಾತುಗಳು ನನ್ನಲ್ಲೇಕೊ ಭಯ ಹುಟ್ಟಿಸುತ್ತಿದ್ದವು. ಅವಳ ಭಾವನೆಗಳನ್ನ ಬದಲಿಸುವ ಸಲುವಾಗಿ ನಾನು ಮತ್ತೆ ಮತ್ತೆ ಒತ್ತಿ ಹೇಳಿದೆ "ಏನೇ ಆದರೂ ಅವರು ಮಾಡುತ್ತಿರುವುದು ವ್ಯಭಿಚಾರ, ಅವರದು ಅನೈತಿಕ ಸಂಬಂಧ......" "ಯಾವ್ದು ವ್ಯಭಿಚಾರ? ಆ ಮುಚ್ಚಿದ ಬಾಗಿಲುಗಳ ಮರೇಲಿ ಏನು ನಡೆಯುತ್ತಿದೆ ಅಂತ ನೋಡಿದವರ್‍ಯಾರು? ಒಂದು ಹೆಣ್ಣು, ಗಂಡಿಗೆ ಏಕಾಂತದಲ್ಲಿ ಅದು ಬಿಟ್ಟರೆ ಬೇರೇನೂ ಇರುವುದಿಲ್ವಾ.....? ಆಯ್ತು ನಿನ್ನ ಮಾತಿನಂತೆ ವ್ಯಭಿಚಾರನೇ ಆಗ್ಲಿ ಬರೀ ಲೀಲಕ್ಕನ ಬಗ್ಗೇನೆ ಯಾಕೆ ಯೋಚಿಸ್ತಿ? ಆಕೇನ ಮಾತ್ರ ಯಾಕೆ ದೂಷಿಸ್ತಿ? ಬರೀ ದುಡ್ಡು ಮನೆ ಇದ್ಬಿಟ್ರೆ ಸಾಕಾ? ಮುತ್ತಿನಂತಹ ಮಕ್ಳು ನಿಜ. ಆದ್ರೆ ಮಕ್ಳು ಆಗ್ಬಿಟ್ರೆ ಎಲ್ಲಾ ಮುಗಿದೋಯ್ತಾ? ಲೀಲಕ್ಕನಿಗೂ ಚಿಕ್ಕ ವಯಸ್ಸು. ಮಕ್ಕಳಾದ ಮಾತ್ರಕ್ಕೆ ಗಂಡನ ಪ್ರೀತಿ, ಪ್ರೇಮ ಅಪೇಕ್ಷಿಸೋದು ತಪ್ಪಾ? ಆತನೋ ಯಾವಾಗಲು ಬಿಸಿನೆಸ್. ಮನೇಲಿರೋದೇ ಅಪರೂಪ. ಸದಾ ಊರಿಂದ ಹೊರಗೆ. ಎಂದಾದರೂ ಅವನು, ಲೀಲಕ್ಕ ಒಟ್ಟಾಗಿ ಹೊರಹೋಗಿದ್ದು ನೋಡಿದ್ಯಾ......? ಒಂದು ಮಾತುಕತೆ, ನಗುನಲಿವು ಇಲ್ದೆ ಆ ದೊಡ್ಡ ಬಂಗಲೆಯಲ್ಲಿ ಒಂಟಿಯಾಗಿ ಬಿದ್ದಿರು ಅಂದ್ರೆ ಅವಳೇನು ಮರದ ಕೊರಡಾ.....? ಅದಕ್ಕೆ ಕಣೇ ಲೀಲಕ್ಕ ದಿಟ್ಟೆ. ಗೆದ್ದಲು ಹಿಡಿದವಳಂತೆ ಒಳಗೇ

ಸವೆದು ಹೋಗುವ ಬದಲು ಜೀವನವನ್ನು ತನಗೆ ಬೇಕಾದ ಹಾಗೆ ಅನುಭವಿಸುತ್ತಿದ್ದಾಳೆ. ಪುಕ್ಕಲಾಗಿದ್ದರೆ, ಜನಕ್ಕೆ ಅಂಜಿ ಒಳಗೇ ಇರುತ್ತಿದ್ಲು ನಿಜ. ಆದರೆ ಮನಸ್ಸು..... ? ಆದ್ಯಾರ ಹಿಡಿತಕ್ಕೆ ಸಿಗುತ್ತಿತ್ತು ಹೇಳು...... ? ಮನಸ್ಸಲ್ಲಾದರೂ ಇನ್ನೊಬ್ಬನನ್ನು ಬಯಸುತ್ತಿದ್ದಳು, ಅವನೊಂದಿಗೆ ಸುಖಿಸುತ್ತಿದ್ದಳು, ನೇರವಾಗಿ ಹೇಳ್ಬೇಕಂದ್ರೆ ಮಾನಸಿಕ ವ್ಯಭಿಚಾರಿ ಆಗಿರುತ್ತಿದ್ಲು....... ನನ್ನ ಹಾಗೆ......" "ಸವೀ...." ನಾನು ಚೀರಿದೆ. ನನ್ನ ದನಿ ಕಂಪಿಸುತ್ತಿತ್ತು. "ಯಾಕೆ ನಿನ್ನ ಸವಿ ಲೀಲಕ್ಕನ ಇನ್ನೊಂದು ಮುಖ ಎಂದು ಹೇಸಿಗೆ ಆಗ್ತಿದ್ಯಾ?" "ಸವಿ, ಸವಿ....... ಶೇಖರ್..... ? ಶೇಖರ್....." ನಾನು ತೊದಲುತ್ತಿದ್ದೆ. "ಶೇಖರ್..." ಅವಳ ಮಾತಿನಲ್ಲಿ ಉಕ್ಕಿದ ತಿರಸ್ಕಾರ, ಹೇಸಿಗೆ ಹಿಂದೆ ಲೀಲಕ್ಕನ ಬಗ್ಗೆಯಿದ್ದಷ್ಟೆ ಗಾಢವಾಗಿದ್ದಂತಿತ್ತು. ನನಗೇಕೋ ಅಳು ಒತ್ತರಿಸಿಕೊಂಡು ಬರುತ್ತಿತ್ತು. ಸವಿಯ ಗಂಭೀರತೆ, ಅವಳಾಡುವ ಮಾತು, ಗಂಡನ ಮೇಲಿನ ತಿರಸ್ಕಾರ ಎಲ್ಲವನ್ನೂ ಗಮನಿಸಿದಾಗ ಸವಿಯ ಜೀವನದಲ್ಲೇನೋ ಹೆಚ್ಚುಕಮ್ಮಿ ಆಗಿದೆಯೆಂಬುದು ಖಚಿತವಾಗಿತ್ತು ನನಗೆ.

ಅಂದು ರಾತ್ರಿ ಮಲಗಿದ್ದಾಗ ಹಾಸಿಗೆಯಲ್ಲಿ ತನ್ನ ನೋವನ್ನು ನನ್ನೆದುರು ತೋಡಿಕೊಂಡಳು ಸವಿ. "ಸುಜಿ, ಮದ್ವೆಯಾದ ಒಂದೆರಡು ವರ್ಷ ನನ್ನಷ್ಟು ಸುಖಿ ಯಾರೂ ಇಲ್ಲ ಎಂದೇ ಭಾವಿಸಿದ್ದೆ ನಾನು. ಬಹುಶಃ ಎಲ್ಲಾ ಹೆಣ್ಣುಗಳೂ ಹೀಗೇ ಭಾವಿಸುವರೋ ಏನೋ. ನಿನಗೆ ತಿಳದ ಹಾಗೆ ನಾನು ಶೇಖರ್ ಆಗಲಿರುತ್ತಿದ್ದೆ ಅಪರೂಪ. ಬ್ಯಾಂಕ್ ಮುಗಿದೊಡನೆ ಸೀದ ನನ್ನ ತೋಳಿನೊಳಕ್ಕೆ ಒಮ್ಮೆ ಅವನ ಎದೆಯಲ್ಲಿ ಹುದುಗಿದರೆ ಬೆಳಗಾಗುವತನಕ ಎಚ್ಚರವಿರುತ್ತಿರಲಿಲ್ಲ. ಹಾಗೆ ಅಮಲೇರಿಸುತ್ತಿದ್ದ. ಅವನ ಬೆಚ್ಚಗಿನ ಅಪ್ಪುಗೆಯಿಲ್ಲದೆ ನಿದ್ರೆ ನನ್ನತ್ತಿರವೂ ಸುಳಿಯುತ್ತಿರಲಿಲ್ಲ. ನಮ್ಮ ಈ ಪ್ರೇಮಕ್ಕೆ ಸಾಕ್ಷಿ ಎಂಬಂತೆ ಸುರೇಶ್ ನನ್ನ ಗರ್ಭದಲ್ಲಿ ಚಿಗುರುತ್ತಿದ್ದ.

ಶೇಖರ್ ಅತಿಕಾಮಿ ಹಾಗು ಸ್ವಾರ್ಥಿ. ವರ್ಷಕ್ಕೊಂದರಂತೆ ಹುಟ್ಟಿದ ಎರಡು ಮಕ್ಕಳು ನಮ್ಮ ಬದುಕನ್ನು ಪ್ರವೇಶಿಸಿದ್ದವು. ಅವುಗಳ ಆಗಮನದಿಂದ ಅನೇಕ ಬದಲಾವಣೆಗಳಾದವು. ಅವು ಅನಿವಾರ್ಯವಾಗಿದ್ದರೂ ಅವುಗಳನ್ನು ಅರಿಯುವ ತಾಳ್ಮೆ ದೊಡ್ಡ ಮನಸ್ಸು ಶೇಖರನಿಗಿರಲಿಲ್ಲ. ಒಟ್ಟಿನಲ್ಲಿ ಅವನಾಸೆ ತೀರಬೇಕು. ಸುರೇಶ್ ಎರಡು ವರ್ಷದವನಾಗುವವರೆಗೂ ಪದೇಪದೇ ಖಾಯಿಲೆ ಬೀಳುತ್ತಿದ್ದ. ಎರಡು ಚಿಕ್ಕ ಮಕ್ಕಳನ್ನು ನೋಡಿಕೊಂಡು, ಮನೆಕೆಲಸ ತೂಗಿಸಿ ಏಗುವುದರಲ್ಲಿ ನನಗೆ ಸಾಕಾಗಿಹೋಗುತ್ತಿತ್ತು. ಮಕ್ಕಳತ್ತಲೇ ನನ್ನೆಲ್ಲ ಲಕ್ಷ್ಯ. ಹಿಂದಿನಂತೆ ಸದಾ ಶೇಖರನಿಗೆ ಅಂಟಿಕೊಂಡೇ ಇರಲು, ಸಂಜೆ ಅವನು ಬಂದೊಡನೆ ಅವನ ತೆಕ್ಕೆಗೆ ಹಾರಲು ಸಾಧ್ಯವಾಗುತ್ತಿರಲಿಲ್ಲ. ಅವನ ಎಷ್ಟೊ ಬಯಕೆಗಳನ್ನು ನನ್ನಿಂದ ಪೂರೈಸಲು ಸಾಧ್ಯವೇ ಆಗುತ್ತಿರಲಿಲ್ಲ. ನನ್ನ ದೇಹಸ್ಥಿತಿಯೂ ಇದಕ್ಕೆ ಕಾರಣವಾಗಿ ಅವನು ಸಿಡುಕಿ ರೇಗತೊಡಗಿದ್ದ. ನನ್ನ ಕಷ್ಟ

ಹೇಳಿದರೂ ಕೇಳುವ ಮನಸ್ಥಿತಿ ಅವನಲ್ಲಿರಲಿಲ್ಲ. "ನೀನೊಬ್ಬಳೆ ಅಲ್ಲ ಮಕ್ಕಳನ್ನು ಹಡೆದಿರುವುದು, ಪ್ರತಿಯೊಬ್ಬ ಹೆಣ್ಣೂ ಹಡೀತಾಳೆ ಆದರೆಷ್ಟು ಲವಲವಿಕೆಯಿಂದ ಇರ್ತಾರೆ" ಎಂದು ತನ್ನ ಸಹೋದ್ಯೋಗಿಗಳೊಂದಿಗೋ, ಬೇರಾರೋ ಹೆಂಗಸೊಂದಿಗೋ ನನ್ನನ್ನು ಹೋಲಿಸಿ ಗೇಲಿಮಾಡುತ್ತಿದ್ದ. ಮಕ್ಕಳೊಡನೆಯೂ ಅಷ್ಟೆ ಎಷ್ಟೋ ಅಷ್ಟು. ಪರಿಸ್ಥಿತಿ ಹೀಗೇ ಮುಂದುವರೆದು ಯಾವ ಮಟ್ಟಕ್ಕೆ ಹೋಯಿತೆಂದರೆ ಅವನು ದಿನಾ ಮನೆ ಸೇರುವುದು ಮಧ್ಯರಾತ್ರಿಗೆ. ನನ್ನೊಂದಿಗೆ ಮಾತೇ ಕಮ್ಮಿಯಾಗಿ ಬರಬರುತ್ತ ಅವನ್ಯಾರೋ ಅಪರಿಚಿತನಂತೆ ಭಾಸವಾಗಹತ್ತಿದ್ದ. ಅವನ ವರ್ತನೆಯಿಂದ ದಿಗಿಲುಗೊಂಡ ನಾನು ಮಕ್ಕಳನ್ನು ನೋಡಿಕೊಳ್ಳಲು ಆಯಾಳನ್ನು ನೇಮಿಸಿಕೊಂಡೆ. ಮಕ್ಕಳನ್ನು ಆಕೆಗೆ ರೂಢಿಗೊಳಿಸಿ ನಾನು ಬಿಡುವಾಗಿ ಶೇಖರನತ್ತ ಸಂಪೂರ್ಣ ಗಮನಹರಿಸಿದೆ. ಅವನು ಬದಲಾಗಲಿ ಎಂದು ತಾಳ್ಮೆಯಿಂದ ಕಾದೆ. ಆದರೆ ಶೇಖರ್ ಬದಲಾಗುವಂತೆಯೇ ಇರಲಿಲ್ಲ. ಸದಾ ಹೊರಗೆ ಸುತ್ತಾಟ, ಬೇಕೆಂದಾಗ ಊಟ ತೀರಿದರೆ ಮುಗಿಯಿತು. ತನಗೇ ಬಯಕೆ ಕಾಡಿದಾಗ ಸುಮ್ಮನೆ ನನ್ನೊಂದಿಗೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ. ಒಂದು ಮಾತಿಲ್ಲ ಕತೆಯಿಲ್ಲ. ಅವನ ಈ ವರ್ತನೆ ನನ್ನನ್ನು ನೋಯಿಸುತ್ತಿತ್ತು. ಕೆಲವೊಮ್ಮೆ ತಡಿಯಲಾರದೆ ಕಣ್ಣೀರಿಡುತ್ತಿದ್ದೆ. ಅದನ್ನೂ ಸಹಿಸದವ "ಏನಾಗಿದ್ಯೆ.....?" ಎಂದು ಸಿಡುಕಿ, ರಂಪ ಮಾಡಿಬಿಡುತ್ತಿದ್ದ. ನನ್ನ ಹೃದಯ ಬೆಂದು ಹೋಗುತ್ತಿತ್ತು. ಮನಸ್ಸು ನೆಮ್ಮದಿಗೆಟ್ಟಿತ್ತು. ನನಗೆ ಅವನ ಹಿಂದಿನ ಪ್ರೀತಿ ಬೇಕಾಗಿತ್ತು. ಅದಿಲ್ಲದೆ ನಾನು ಹುಚ್ಚಳಂತಾಗಿದ್ದೆ. ಅವನ ಬೆಚ್ಚಗಿನ ಅಪ್ಪುಗೆಯಿಲ್ಲದೆ ಅದೆಷ್ಟು ದಿನಗಳಾಗಿದ್ದವು. ನಾನಾಗಿಯೇ ಅವನನ್ನು ಬಳಸಿ ಹಿಡಿದರೆ "ಸುಮ್ನೆ ಬಿದ್ಕೊಳೇ ನಂಗೆ ನಿದ್ದೆ ಬರ್ತಿದೇ...." ಎನ್ನುತ್ತಿದ್ದ. ನಾನಾಗ ಕೆರಳುತ್ತಿದ್ದೆ. ಹೀಗೆ ಒಮ್ಮೆ ತಾಳ್ಮೆಗೆಟ್ಟು ಅವನನ್ನು ಜೋರಾಗಿ ಹಿಡಿದು ಅಲ್ಲಾಡಿಸಿ "ನನಗೆ ನಿದ್ದೆ ಬರ್ತಾ ಇಲ್ವಲ್ಲ ನಾನು ಏನ್ಮಾಡ್ಲಿ.....?" ಎಂದಾಗ ದಡಕ್ಕನೆದ್ದವನೆ "ನಿದ್ದೆ ಬರೋಲ್ವೇನೆ? ಏನ್ಮಾಡ್ಲೆ ನಾನು...... ಹೇಳೇ ಅದೇನ್ಮಾಡ್ಬೇಕು ಹೇಳೇ ಮಾಡ್ತೀನಿ...." ಎಂದು ತೀರ ಅಸಹ್ಯವಾಗಿ ವರ್ತಿಸಿದಾಗ ನನಗಲ್ಲೇ ಸಾಯುವಂತಾಗಿತ್ತು. ಮೈಯಲ್ಲಿ ಪರಚಿಕೊಂಡು ಜೋರಾಗಿ ಚೀರುವಂತಾಗಿತ್ತು. ಇಂತಹ ಅಪಮಾನ ಕನಸಿನಲ್ಲಿಯೂ ಎಣಿಸಿದವಳಲ್ಲ ನಾನು. ನನ್ನದೆ ಒಡೆದುಹೋಗಿತ್ತು. ಅವನು ನನ್ನ ಹೆಣ್ತನಕ್ಕೆ ಅಪಮಾನ ಮಾಡಿದ್ದ. ನನ್ನನ್ನು ಚೂರುಚೂರು ಮಾಡಿದ್ದ. ಅದೆಷ್ಟು ರಾತ್ರಿಗಳನ್ನು ನಿದ್ದೆಯಿಲ್ಲದೆ ಕಳೆದಿರುವೆನೋ ಆ ದೇವರಿಗೇ ಗೊತ್ತು. ಅವನು ನನ್ನ ಮೇಲೆ ಸೇಡು ತೀರಿಸಿಕೊಳ್ಳುವವನಂತೆ ವರ್ತಿಸುತ್ತಿದ್ದ. ಅವನ ಹೊರಗಿನ ಯಾವೊಂದು ಚಟುವಟಿಕೆಗಳೂ ನನಗೆ ಗೊತ್ತಿರಲಿಲ್ಲ. ನಾನು ಯಾವ ಗೊಡವೆಗೂ ಹೋಗಲಿಲ್ಲ. ಅವನಿಗಾಗಿ ಹಂಬಲಿಸಿ, ಕೊರಗುವುದನ್ನು ಬಿಟ್ಟೆ. ಅವನಿಂದ ಯಾವ ನಿರೀಕ್ಷೆಯೂ ನನ್ನಲ್ಲುಳಿಯಲಿಲ್ಲ. ಅವನ ಬಗೆಗಿದ್ದ ಭಾವನೆಗಳು ಸಾಯತೊಡಗಿದ್ದವು. ಆದರೆ ನನ್ನ ಭಾವನೆಗಳೂ ಇನ್ನೂ ಜೀವಂತವಾಗಿದ್ದು ಅದಕ್ಕೆ ಸಾಕ್ಷಿಯೋ ಎಂಬಂತೆ ಆ ದಿನಗಳಲ್ಲಿ ಲೀಲಕ್ಕ ನೆನಪಾಗುತ್ತಿ

ದ್ದರು. ಹಿಂದೆಯೇ ಆ ಪ್ರಾಣಿ- ಅವನು ಮನಸ್ಸಿಗೆ ಬರುತ್ತಿದ್ದ. ಲೀಲಕ್ಕನ ಪರಿಸ್ಥಿತಿ ಅರ್ಥವಾಗುತ್ತಿತ್ತು. ಕಣ್ಮುಚ್ಚುತ್ತಲೂ ಇವರಿಬ್ಬರು ನನ್ನಾವರಿಸುತ್ತಿದ್ದರು. ಬರಬರುತ್ತ ಲೀಲಕ್ಕ ಮರೆಯಾಗಿ ಅವನೊಬ್ಬನೇ ಉಳಿಯುತ್ತಿದ್ದ...... "ಕೆಲವೊಮ್ಮೆ ಅಂದು ನೋಡಿದ ಸಿನಿಮಾದ ನಾಯಕನಂತೆ ಕಂಡರೆ ಮಗದೊಮ್ಮೆ ಅಂದು ಓದಿದ ಕಥೆಯ ನಾಯಕನಂತೆ ಕಾಣುತ್ತಿದ್ದ. ನಾನಾಗ ನಿದ್ರಿಸತೊಡಗಿದ್ದೆ....." ಮಾತು ನಿಲ್ಲಿಸಿ ನನ್ನತ್ತ ನೋಡಿದಳು ಸವಿ. ನಾನು ಮೂಕಳಾಗಿದ್ದೆ. ಅರೆಕ್ಷಣ ನನ್ನ ಮೊಗವನ್ನೆ ದಿಟ್ಟಿಸಿ ಹೇಳಿದಳು "ಹೀಗೆ ನೇರವಾಗಿ ಹೇಳ್ತಿದ್ದೀನಿ ಅಂತ ಬೇಸರಪಡಬೇಡ, ನಿನ್ನ ನೋಯಿಸ್ತಿದ್ದೀನಿ ಅಂತ ಖಂಡಿತ ಅಂದ್ಕೋಬೇಡ ಇರುವ ವಿಷ್ಯ ತಿಳಿಸ್ತಿನಿ. ಸುಜಿ, ಗಂಡಿನ ಸುಖ, ಅವನ ಸಾಮೀಪ್ಯದ ಅನುಭವವಿಲ್ಲ ನಿನಗೆ; ನನ್ನ ಒಳಗುದಿ ಅರ್ಥವಾಗಲಾರ್ದು. ಆದರೆ ಒಮ್ಮೆ ಅದನ್ನು ಅನುಭವಿಸಿ, ಅದರಿಂದ ವಂಚಿಸಲ್ಪಟ್ಟರೆ ಆ ಹಿಂಸೆ ಬಲು ಕ್ರೂರ. ಕೆಲವೊಮ್ಮೆ ನನ್ನನ್ನು ನಾನೇ ಕೊಂದುಕೊಳ್ಳಲೇ ಏನಿಸುತ್ತೆ......" ನಾನು ಪಕ್ಕನೆ ಅವಳ ಬಾಯಿ ಮುಚ್ಚಿದೆ. ನನ್ನ ಕೈ ಸರಿಸುತ್ತ ವಿಷಾದದಿಂದ ನಕ್ಕು ಹೇಳಿದಳು ಸವಿ "ಅಷ್ಟೊಂದು ಧೈರ್ಯವಿದ್ದಿದ್ದರೆ ಲೀಲಕ್ಕನಂತೆ ರಾಜಾರೋಷವಾಗಿ ಬದುಕುತ್ತಿದ್ದೆ......"

ಸವಿ ಊರಿಗೆ ಹೋಗಿ ಆಗಲೇ ಒಂದು ವಾರದ ಮೇಲಾಗಿತ್ತು. ಈ ಬಾರಿ ಅಮ್ಮನನ್ನೂ ಜೊತೆಯಲ್ಲಿ ಕರೆದೊಯ್ದಿದ್ದಳು. ಮನೆಯಲ್ಲಿ ಒಬ್ಬಳೇ. ಹೊರಗೆ ತರಕಾರಿ ಮಾರುವವನು ಕೂಗುತ್ತಿದ್ದ. ಏನಿದೆಯೋ ನೋಡೋಣವೆಂದು ಬಾಗಿಲು ತೆರೆದು ಹೊರಬಂದೆ ಲೀಲಕ್ಕ ಏನನ್ನೊ ಖರೀದಿಸುತ್ತಿದ್ದರು. ಅವರನ್ನು ನೋಡಿ ಮುಂಚಿನಂತೆ ಹೇಸಿಗೆ ಏನಿಸಲಿಲ್ಲ. ತಿರಸ್ಕಾರ ಉಕ್ಕಲಿಲ್ಲ ಬದಲಿಗೆ ಹಿಂದಿನಂತೆ ಅವರನ್ನು "ಲೀಲಕ್ಕ...." ಎಂದು ಕರೆದಿದ್ದೆ ನನಗರಿವಿಲ್ಲದೆ "ಊಟ ಆಯ್ತಾ ಲೀಲಕ್ಕ.... ?" ನನ್ನ ಮಾತು ಕೇಳಿ ಅರೆಕ್ಷಣ ಅವರು ಗಲಿಬಿಲಿಗೊಂಡರು. ತಮಗಾದ ಆಶ್ಚರ್ಯವನ್ನು ಅಡಗಿಸುವ ಪ್ರಯತ್ನವನ್ನೂ ಮಾಡಲಿಲ್ಲ "ಹೂಂನಮ್ಮ ಆಯ್ತು. ನಿಂದಾಯ್ತು?" ಎಂದರು ಅವರ ಆಶ್ಚರ್ಯ ಸಂತೋಷವಾಗಿ ಅದು ಮುಖವನ್ನು ಅರಳಿಸುತ್ತಿತ್ತು. ಬಹುಶಃ ಹೆಚ್ಚು ಹೊತ್ತು ನಿಲ್ಲಲಾಗಲಿಲ್ಲವೇನೋ "ಬರ್ಲಾ ಸುಜೀ ಒಳ್ಗೆ ಕೆಲ್ಸ ಇದೆ......" ಎಂದು ತಮ್ಮ ಬುಟ್ಟಿಯೊಡನೆ ಸರಿದುಹೋದರು. ನಾವು ಅವರ ಬಗ್ಗೆ ಎಷ್ಟು ಕೀಳಾಗಿ ನಡೆದುಕೊಂಡಿದ್ದೆವೆಂದರೆ ಇನ್ನಾರಾದರೂ ಆಗಿದ್ದಲ್ಲಿ ಮುಖಕ್ಕೆ ಉಗಿದು ಹೋಗುತ್ತಿದ್ದರೇನೋ. ಆದರೆ ಲೀಲಕ್ಕ ಅದೇ ಆತ್ಮೀಯತೆಯಿಂದ ಮಾತಾಡಿಹೋಗಿದ್ದರು. ಸವಿ ಆಡಿದ್ದನ್ನೆ ನಾನು ಮತ್ತೆ ಆಡಿದೆ.. "ಲೀಲಕ್ಕ ಯೂ ಆರ್ ರಿಯಲೀ ಗ್ರೇಟ್ !"

* * *

# ಅಜ್ಞಾತ

ಇಡೀ ದಿನದ ಪಯಣದ ಆಯಾಸ ಹಳ್ಳಿಯ ತೋಟದ ಮನೆ ನೋಡುತ್ತಿದ್ದಂತೆ ಪರಿಹಾರ ಆಗಿತ್ತು. ಜೊತೆಯಲ್ಲಿ ಅವ್ವ ತಂದಿತ್ತ ತಣ್ಣನೆಯ ಮಜ್ಜಿಗೆ ಕುಡಿದು ನೆಲದ ಮೇಲೆ ದಿಂಬನೆ ಆಸರೆ ಕೊಟ್ಟು ಉರುಳಿಕೊಂಡಾಗ ನಿದ್ದೆ ತಾನಾಗಿಯೇ ಆವರಿಸಿತ್ತು ಮಾಲಿಂಗನನ್ನು. ಕಣ್ಣುಬಿಟ್ಟಾಗ ಆಗಲೇ ಸಂಜೆಯಾಗಿ ಅವ್ವ ಹಿತ್ತಾಳೆ ಲೋಟದ ತುಂಬಾ ಘಮಘಮಿಸುವ ಕಾಫಿ ಹಿಡಿದು ಬಂದಾಗ ದಿಗ್ಗನೆದ್ದ. ಕಾಫಿ ಹೀರಿ "ಹೀಗೆ ಅಡ್ಡಾಡಿ ಬರ್ತೀನಿ" ಎಂದು ಹೊರಟ ಮಗನನ್ನೆ ದಿಟ್ಟಿಸಿದಳು ಅವ್ವ.

ಎರಡು ವರ್ಷಗಳ ಹಿಂದೆ ಬಂದವನು. .ಎರಡು ತಿಂಗಳ ಹಿಂದೆ ಮಗಳು ನಳಿನಳ ಮದುವೆಗೆ ತಾನೆ ಎಲ್ಲರೂ ಹೋಗಿದ್ದರು ಬೆಂಗಳೂರಿಗೆ. ಮದುವೆಯ ಕಾರ್ಯ ಮುಗಿದೊಡನೆ ತಾವು ಹೊರಟುನಿಂತಾಗ ಹೂಂ ಎನ್ನಲು ಆಗದೆ ಬೇಡವೆನ್ನಲೂ ಆಗದ ಚಡಪಡಿಕೆ; ವರ್ಷಗಳ ನಂತರ ಬಂದ ಅವ್ವನನ್ನು ಇನ್ನೆರಡು ದಿನ ಉಳಿದುಹೋಗು ಎನ್ನಲಾಗದ ಸಂಧಿಗ್ಧತೆ ಅವನ ಕಂಗಳ್ಳಲ್ಲಿ ಸ್ಪಷ್ಟವಾಗಿತ್ತು. "ಆಯ್ತುವ್ವ ಹೊರಡ್ರಿ....... ರಾಮಯ್ಯನಿಗೇಳ್ತಿನಿ ಕಾರ್ನಾಗೆ ಸ್ಟ್ಯಾಂಡ್‌ವರ್ಗೂ ಬಿಡ್ತಾನೆ......" ಎಂದು ಕಾರತ್ತಿಸಿ ಕೈಬೀಸಿದ್ದರು ಗಂಡ ಹೆಂಡತಿಯಿಬ್ಬರು. ಬಸ್ಸತ್ತಿಸಿದ ರಾಮಯ್ಯ ತನ್ನ ಕೈಗೆ ಇನ್ನೂರ ನೋಟಿತ್ತು "ಸಾಹೇಬ್ರು ಕೊಡಾಕೇಳಿದ್ರು" ಎಂದಾಗ ಊರು ತಲುಪುವವರೆಗೂ ಕಂಬನಿ ನಿಂತಿರಲಿಲ್ಲ. ನೆನಪಿನಿಂದ ತೊಟ್ಟಿಕ್ಕಿದ್ದ ಕಂಬನಿಯನ್ನು ತೊಡೆದು ಮೇಲೇಳುವಷ್ಟರಲ್ಲಿ ದುಗ್ಗ "ಕೋಳಿ ಮುಚ್ಚಿಟ್ಟೀನವ್ವಾ......" ಎಂದು ಬಂದು ಹೇಳಿದ. ಹಿರಿಸೊಸೇನ ಕೂಗಿ "ರಾತ್ರಿಗ್ ಮುದ್ದೆ ಕೋಳಿಸಾರು ಬೇಗ ಮಾಡ್ಬಿಡು. ಮುದ್ದೆ ಬೆಣ್ಣೆಯಿದ್ದಂಗಿ

ರ್ಬೇಕು....... ದಪ್ಪನಾಗ್ ಕಾಯದವೆ ಅಂತ ಸುರ್‍ವಿ ಸಾರು ಗಬ್ಬೆಬ್ಬಿಸ್ಬೇಡ. ಅಂಗೆಯ ಆ ಪುಕ್ಕದ್ದು, ಹೀರಿ, ಮೊಟ್ಟೇದೆಲ್ಲಾ ತಗ್ದು ಬೆಳ್ಳುಳ್ಳಿ, ಖಾರದ್ಪುಡು ಜಜ್ಜಿ ಹಾಕಿ ಎಣ್ಣ್ಯಾಗೆ ಹುರ್ದು ಬಿಡ್ರಿ....... ಮೊದ್ಲೆ ಆ ಪ್ಯಾಟೆಗೆ ಆ ನೀಸುನಾತ ಹೊಡಿಯೋ ಬಯ್ಲರ್ ಕೋಳಿ ತಿಂದುತಿಂದು ನಾಲ್ಗೆ ಜಡ್ಡುಗಟ್ಟಿ ಹೋಗಿರ್‍ವೈತೆ..... ಇಲ್ಲಾನ ಸ್ವಲ್ಪ ಸಮಾಧಾನಸದಾಗೆ ಉಣ್ಲೆ......" ಎಂದು ಹೇಳಿ ಹೊರಬರುವಷ್ಟರಲ್ಲಿ ದೂರದಲ್ಲಿ ಮಾಲಿಂಗ, ಸ್ನೇಹಿತ ಮಲ್ಲಯ್ಯನ ಜತೇಲಿ ಬರೋದು ಕಾಣಿಸಿತು. ಬರುಬರುತ್ತಲೆ 'ಅವ್ವಾ......' ಎಂದು ಕೂಗುತ್ತ ಬಂದವನು ಅಲ್ಲಿಯೇ ನಿಂತಿದ್ದ ಅವ್ವನನ್ನು ನೋಡಿ "ರಾತ್ರಿಕೇನವ್ವ ಅಡ್ಗೆ....." ಎಂದ ಮಗನನ್ನು ನೋಡಿ ಮದುವೆಗೂ ಮೊದಲಿನ ಆ ಮಾಲಿಂಗ ತಟ್ಟನೆ ಕಣ್ಣೆದುರು ಬಂದಂಗಾಯ್ತು. ಮದುವೆ ಆದೇ ಆಯ್ತು ಹೆಂಡತಿ, ಮಕ್ಕಳ ಹೊರತು ಬೇರೆಯೆಲ್ಲ ಮರೆತು ಹೋದವನಂತಿದ್ದ ಮಾಲಿಂಗ. ಊರಿಗೆ ಬಂದರೂ ಎರಡು ತಾಸು ಇದ್ದರೆ ಹೆಚ್ಚಾತು. ಪಕ್ಕದೂರಿನ ಪ್ರವಾಸಿಮಂದಿರದಲ್ಲಿ ಇಳಿದುಕೊಂಡು ಬರೀ ಊಟಕ್ಕೆ ಮಾತ್ರ ಬಂದು ಹೋಗುತ್ತಿದ್ದರು ಅವನ ಹೆಂಡತಿ, ಮಕ್ಕಳು. ಕೆಲವೊಮ್ಮೆ ಊಟವನ್ನೂ ಅಲ್ಲಿಗೆ ಕಳುಹಿಸಬೇಕಾಗುತ್ತಿತ್ತು. ಮೊದಮೊದಲು ಮಗ ಪಕ್ಕದೂರಿನ ಪ್ರವಾಸಿಮಂದಿರದಲ್ಲಿ ಉಳಿದು ಹೋಗುವಾಗ "ಇಂತಹ ದೆವ್ವದಂತಹ ಮನೆಯಿದ್ದೂ ಯಾರೋ ಪರ್ದೇಸಿಯಂಗೆ ಎಲ್ಲೋ ಬಂದು ಉಳ್ಕಂಡು ಹೋಗ್ತಾನಲ್ಲ ಮಗ" ಅಂತ ಅವ್ವನ ಕರುಳು ಕುದ್ದು, ಸಂಕಟದಿಂದ ರೋದಿಸುತ್ತಿದ್ದಳು. ಆದರೆ ದಿನಕಳೆದಂತೆ ಸೊಸೆಯ ರೀತಿ, ನಡವಳಿಕೆ ಗಮನಿಸಿ ಎಲ್ಲಾದರೂ ಇರಲಿ, ಹೆಂಗಾನ ಇರಲಿ ಒಟ್ನಲ್ಲಿ ನೆಮ್ಮದಿಯಾಗಿ ಅವರಿದ್ರೆ ಅಷ್ಟೆ ಸಾಕು ಎಂದುಕೊಂಡು ತನ್ನ ಎದೆಯಲ್ಲಿನ ಸಂಕಟ ನುಂಗಿಕೊಂಡಿದ್ದಳು.

ಕಮಲವ್ವ ತಮ್ಮ ದೂರದ ಸಂಬಂಧಿಯ ಮಗಳೇ. ಕಲಿತ ಹೆಣ್ಣು. ಮೂವತ್ತೈದು ಆದರೂ ಮದುವೆಯಾಗದ ಮಗ ಆಕೇನ ನೋಡಿದ ಕ್ಷಣವೇ ಮದುವೆಗೆ ಒಪ್ಪಿಗೆ ನೀಡಿದ್ದ. ತಡಮಾಡದೆ, ಹಿಂದೆಮುಂದೆ ಯೋಚಿಸದೆ ಮದುವೆ ಮುಗಿಸಿದ್ದರು. ದೂರಕ್ಕೆನೋ ಜೋಡಿ ಚೆನ್ನಾಗಿ ಕಂಡರೂ ಕೆಲವೊಮ್ಮೆ ಸೊಸೆಯೆದುರಿಗೆ ತೀರ ವಯಸ್ಸಾದವನಂತೆ ಕಾಣುವ ಮಗ. ಯೌವನ ಉಕ್ಕುತ್ತಿದ್ದ ಅವಳ ಹದಿನಾರರ ಪ್ರಾಯ, ಆ ಪ್ರಾಯ ಅವಳ ಕಂಗಳಲ್ಲಿ ಚಿಮ್ಮಿಸುತ್ತಿದ್ದ ಚಂಚಲತೆ ಅವ್ವನ ಎದೆಯಲ್ಲಿ ಅವಳಿಗರಿವಿಲ್ಲದೆ ಕಂಪನ ಹುಟ್ಟಿಸಿತ್ತು.

"ಅವ್ವಾ, ಅವ್ವಾ....... ನಾನು ರಾತ್ರಿಗೇನ್ ಅಡ್ಗೆ ಅಂತ ಕೇಳ್ತಾ ಇದ್ದೀನಿ ನೀನೇನು ಯೋಚ್ನೆ ಮಾಡ್ತಿದ್ದಿಯಾ.....?" ಎಂದು ಮಾಲಿಂಗ ಅವ್ವನ ಪಕ್ಕಕ್ಕೇ ಕುಳಿತು ಆಕೆಯ ಭುಜದ ಮೇಲೆ ಕೈಯಿಟ್ಟ.

"ಅಂತಾದ್ದೇನು ಇಲ್ಲಪ್ಪ. ನೀನಿಂಗೆ ಊರಿಗ್ಬಂದು, ಉಳ್ಕಂಡು ಎಷ್ಟು ವರ್ಷ ಆಯ್ತು ಅಂದ್ಕಂತಿದ್ದೆ. ಎನ್ ಅಡ್ಗೆ ಅಂದ್ಯಾ......? ಅಗೋ ನೋಡು ದುಗ್ಗ

ಎಠ್ನು ಕೋಳಿ ಮುಚ್ಚಿಟ್ಟಾನೆ...." "ಒಳ್ಳೆದಾಯ್ತು ಬಿಡವ್ವ ನಿನ್ ಕೈನ ಕೋಳಿಸಾರು ಉಂಡು ಅದೆಷ್ಟು ಕಾಲ ಆಯ್ತೊ....." ಮಗ ಅಂದೊಡನೆ ಅವ್ವನೇ ಸೀದ ಅಡುಗೆ ಮನೆ ಹೊಕ್ಕಳು. ಮಗ ಒಂದೊಂದು ತುತ್ತು ತಿಂದಾಗಲು ಇವಳ ಒಡಲು ಸಂತೃಪ್ತಿಯಿಂದ ಬಿರಿದುಹೋಗುತ್ತಿತ್ತು.

ಮೊದಮೊದಲು ಎಲ್ಲವೂ ಸರಿಯಾಗಿದ್ದಂತೇ ತೋರಿತ್ತು. ಒಂದೆರಡು ಬಾರಿ ಮನೆಗೆ ಬಂದಿದ್ದ ಸೊಸೆ ಹೆಚ್ಚು ಮಾತಾಡಲಿಲ್ಲ ಎಂಬುದರ ಹೊರತು ಉಳಿದಂತೆ ಸಮನಾಗಿಯೇ ಇದ್ದಳು. ಆದರೆ ಯುಗಾದಿಗೆ ಮಗನ ಮನೆಗೆ ಹೋದ ದಿನ ಅವ್ವನಿಗೆ ಅವಳ ನಿಜರೂಪದ ದರ್ಶನವಾಗಿತ್ತು. ಅಂದು ಅವಳು ಬೆಂಗಳೂರಿಗೆ ಹೋದ ದಿನ ಮನೆಯಲ್ಲಿ ಅವರು ಕೆಲಸಕ್ಕೆಂದು ಮನೆಯಲ್ಲೇ ಇಟ್ಟುಕೊಂಡಿದ್ದ ಅನಾಥ ಹುಡುಗಿ ಸಾವಿತ್ರಿಯನ್ನು ಬಿಟ್ಟು ಬೇರಾರು ಕಾಣಲಿಲ್ಲ. ಸಾವಿತ್ರಿಯನ್ನು ವಿಚಾರಿಸಿದಾಗ ಸೊಸೆ ತಾವು ಗೇಟಿನ ಬಳಿಯಿದ್ದಾಗ ಕೋಣೆ ಸೇರಿದಳೆಂದೂ, ಯಾರು ಬಂದರೂ ಎಬ್ಬಿಸಬೇಡ ಎಂದು ಹೇಳಿರುವರೆಂದೂ ಆ ಹುಡುಗಿ ಹೇಳಿದಾಗ ಅವ್ವನಿಗೆ ಪೆಚ್ಚಾದರೂ ತೋರ್ಪಡಿಸದೆ ಆ ಹುಡುಗಿಯೊಡನೆ ಹರಟುತ್ತ ಅಡುಗೆಮನೆಯಲ್ಲಿ ಕೂತಳು. ಸಂಜೆ ಮಗ ಮನೆಗೆ ಬರುವವರೆಗೂ ಕೋಣೆ ಬಿಟ್ಟು ಹೊರಬರದ ಸೊಸೆ ಅವನು ಬರುತ್ತಿದ್ದಂತೆ ದೊಡ್ಡ ರಂಪನೇ ತೆಗೆದುಬಿಟ್ಟಳು. ಅಳುತ್ತ ದೂಷಿಸಿದ್ದಳು ಅವ್ವನನ್ನು "ನೋಡ್ರಿ ಮಧ್ಯಾಹ್ನ ಬಂದೋರು, ತಲೆನೋವಂತ ಮಲ್ಗಿದ್ದೀನಿ ಏನಮ್ಮ ಹೇಗಿದ್ದಿ........? ಅಂತ ಒಂದ್ಮಾತು ಕೇಳ್ಬಾರ್ದ......? ಹೋಗಿ ಆ ಕೆಲ್ಸದೋಳ್ ಹತ್ರ ಹರಟೆ ಹೊಡೀತಾರಲ್ಲ ನನಗಿಂತ ಅವ್ಳೆ ಹೆಚ್ಚಾದ್ಲ...... ಅವ್ಳು ಮುಂದೆ ಇದೆಂತಹ ಅವಮಾನರೀ......? ಈ ಮನೇಲಿ ನನಗಿಲ್ಲದ ಮರ್ಯಾದೆ ಅವ್ಳಿಗಿದೆ ಅಂದಂಗಾಯ್ತು..... ನಾನೇನು ಅಂತದ್ದು ಮಾಡಿದ್ದೆ......?"

ಹೀಗೆ ಅವಳ ಮಾತುಗಳು ಬೆಳೆಯುತ್ತಲೇ ಹೋಗಿ ಅವ್ವನನ್ನು ಗಾಬರಿಗೊಳಿಸಿ, ತಲೆಚಿಟ್ಟೆನಿಸಿತ್ತು. ಹೆಂಡತಿಯನ್ನು ಸಮಾಧಾನಪಡಿಸಲು ಹೆಣಗಾಡುತ್ತ ಮಗ "ಯಾಕಂಗೆ ಮಾಡ್ದೆವ್ವ.....?" ಎಂದಾಗ ತನ್ನೆದುರು ಅವನ ಅಸಹಾಯಕತೆ, ಅರಾಜಕತೆಯನ್ನ ಮುಚ್ಚಿಡುವ ಪ್ರಯತ್ನವನ್ನೂ ಮರೆತವನಂತೆ ಕಂಡಿದ್ದ ಅವನು. ಇತ್ತ ಬೆದರಿದ ಹರಣಿಯಂತೆ ನಡುಗುತ್ತ ಮೂಲೆ ಸೇರಿದ್ದ ಸಾವಿತ್ರಿ ಅವ್ವನ ಕೈಗಳನ್ನು ಹಿಡಿದು "ಅಮ್ಮಾ ನೀವು ಹೋದ್ಮೇಲೆ ನನಗೇನು ಕಾದೈತೋ ಏನೋ......" ಎಂದು ಕಣ್ಣಲ್ಲಿ ನೀರು ತಂದಾಗ ಆ ಸುಂದರ ರೂಪದ ಮರೇಲಿ ಅಡಗಿರುವ ಕರಾಳ ಛಾಯೆಗೆ ವಿಸ್ಮಯಪಟ್ಟು, ಇನ್ನು ಮಗನ ಪಾಡು ನೆನೆದು ಮರುಗಿದಳು. ಅವನು ಹೆಂಡತಿಯನ್ನು ವಹಿಸಿದನಲ್ಲಾ ಎಂಬ ಅಸಮಾಧಾನದ ಬದಲು ಆಕೆಯೆದುರಲ್ಲಿ ಅವನು ಪ್ರದರ್ಶಿಸುತ್ತಿದ್ದ ದೀನ ಮನಸ್ಥಿತಿಗೆ ಮರುಕವುಕ್ಕಿ ಪರಿಸ್ಥಿತಿಯನ್ನು ಸಹಜಸ್ಥಿತಿಗೆ ಮರಳಿಸಲು ಎಂದೂ ಯಾರಿಗೂ ತಲೆಬಾಗದ ಅವ್ವ ಅಂದು ಸೊಸೆಯೆದುರು ತಲೆಬಾಗಿದ್ದಳು. ಮನಸ್ಸಿಲ್ಲದ ಮನಸ್ಸಿನಿಂದ ಹಬ್ಬ

ಮುಗಿಸಿ, ಮರುದಿನವೇ ಊರಿಗೆ ಹಿಂತಿರುಗಿದ್ದ ಅವ್ವ ಮತ್ತೆ ಆ ಮನೆಗೆ ಕಾಲಿಟ್ಟದ್ದು ಮೊಮ್ಮಗ ಹುಟ್ಟಿದ ಮೇಲೆಯೆ.

ಬೆಳಗ್ಗಿನ ಜಾವವೇ ಊರಿಗೆ ಹೊರಟು ನಿಂತ ಮಾಲಿಂಗ "ಮತ್ತೆ ಮುಂದಿನ್ವಾರ ಬರ್ತೀನಿ. ಅಣ್ಣಯ್ಯನತ್ರ ಎಲ್ಲಾ ಮಾತಾಡೀನಿ, ಒಂದು ನೂರು ತೆಂಗಿನಸಸಿ ಕಳಸ್ತೀನಿ...... ಅದಕ್ಕೆ ಎಲ್ಲಾ ವ್ಯವಸ್ಥೆ ಮಾಡ್ಬಿಡ್ರಿ....." ಎಂದಿದ್ದ. ಅವನ ಮುಖದಲ್ಲಿ ಅದುವರೆಗು ಸದಾ ರಾರಾಜಿಸುತ್ತಿದ್ದ ನೋವು, ಅಸಹಾಯಕತೆ ಮಾಯವಾಗಿದ್ದು ಪವಾಡದಂತೆ ತೋರುತ್ತಿತ್ತು.

ಮೊಮ್ಮಗ ಚಂದ್ರ ಹುಟ್ಟಿದಾಗ ನೋಡಲು ಹೋದ ಅವ್ವನಿಗೆ ಆಶ್ಚರ್ಯ ಕಾದಿತ್ತು. ಸದಾ ಮುಖ ಬಿಗಿದುಕೊಂಡು, ಚುಚ್ಚುಮಾತುಗಳಿಂದ ಅವ್ವನನ್ನು ಘಾಸಿಗೊಳಿಸದೆ ನಗುನಗುತ್ತ, ಪ್ರೀತ್ಯಾದರಗಳಿಂದ ನಡೆದುಕೊಂಡಳು ಸೊಸೆ. "ನಿಮ್ಮ ಮೊಮ್ಮಗ ಎಲ್ಲಾ ನಿಮ್ಮಂಗೆ......" ಎಂದಾಗ ಅಮ್ಮ ಸೋತುಹೋಗಿದ್ದಳು ಸೊಸೆಯ ಬಲವಂತಕ್ಕೆ ಒಂದು ವಾರ ಉಳಿದು, ಹೊರಟುನಿಂತಾಗ ಕಾಲಿಗೆ ನಮಸ್ಕರಿಸಿ, ಕಣ್ಣೀರು ಸುರಿಸುತ್ತ "ನೀವೂ ಹೋದ್ರೆ ನಾನೊಬ್ಳೆ ಆಗ್ಬಿಡ್ತೀನಿ..... ಇವ್ನ ನೋಡ್ಕಳಾದು ನನಗೊಬ್ಳಿಗೆ ತುಂಬಾ ಕಷ್ಟವಾಗತ್ತೆ....... ದೊಡ್ಡ ಭಾವನ ಮಗಳು ಲಕ್ಷ್ಮಿಯನ್ನಾದ್ರೂ ಕಳುಹಿಸಿದ್ರೆ ನನ್ಗೂ ಜತೆ ಆಗುತ್ತೆ ಪಾಪನೂ ಮನೇವ್ರ ಕೈಲಿ ಇದ್ದಂಗಾಗುತ್ತೆ....." ಎಂದಿದ್ದಾಗ ಅವ್ವನಿಂದ ಇಲ್ಲವೆನ್ನಲು ಸಾಧ್ಯವಾಗದೆ ಹೋಗಿತ್ತು. ಮದುವೆಗೆ ಬೆಳೆದು ನಿಂತಿದ್ದ ಲಕ್ಷ್ಮಿಯನ್ನು ಎಂದೂ ಮನೆಯಿಂದ ಹೊರಗೆ ಕಳುಹಿಸಿರಲಿಲ್ಲ. ಆದರೆ ಈಗ ತಾನೇ ಖುದ್ದಾಗಿ ಮಗಸೊಸೆಯನ್ನು ಒಪ್ಪಿಸಿ, ಅವರ ಜತೇಲೇ ಲಕ್ಷ್ಮಿಯನ್ನು ಬೆಂಗಳೂರಿಗೆ ಕಳುಹಿಸಿಕೊಟ್ಟಳು. ಬಲು ಸಂಭ್ರಮದಿಂದಲೇ ಹೊರಟಿದ್ದಳು ಹುಡುಗಿ. ಆದರೆ ಕುಣಿದು ಕುಪ್ಪಳಿಸುತ್ತ ಹೋದವಳು ಹದಿನೈದು ದಿನಕ್ಕೆ ಅಳುತ್ತ ಹಿಂದಿರುಗಿದ್ದಳು. ಬಂದವಳೇ ಅಜ್ಜಿಯನ್ನು ತೋಟಕ್ಕೆ ಕರೆದೊಯ್ದು ಏಕಾಂತದಲ್ಲಿ ಮಾತಾಡಿದ್ದಳು,

"ಚಿಕ್ಕಪ್ಪ ಯಾರಿಗೂ ಹೇಳ್ಬೇಡ ಅಂದಿದ್ದ. ಆದ್ರೆ ನನ್ ಮನ್ಸು ತಡೀತಿಲ್ಲ ಅದ್ಕೆ ನಿನ್ನ ಇಲ್ಲಿಗೆ ಕರ್ಕಂಡ್ಬಂದೆ....." ಎಂದು ಮಾತು ನಿಲ್ಲಿಸಿದಾಗ ದಿಗಿಲುಗೊಂಡ ಅವ್ವ "ಯಾಕೆ..... ? ಏನಾಯ್ತು....... ?" ಅಂತ ಒಂದೇ ಉಸಿರಿಗೆ ಕೇಳಿದ್ದಳು. ತಡೆತಡೆದು ಹೇಳಿದ್ದಳು ಲಕ್ಷ್ಮಿ "ಅಜ್ಜಿ...... ಅಜ್ಜಿ ಸಣ್ಣಮ್ಮನಿಗೆ ತಲೆಸರಿಯಿಲ್ಲ...... ಹೆಂಗೆಂಗೋ ಮಾಡ್ತಾಳೆ, ಏನೇನೋ ಮಾತಾಡ್ತಾಳೆ..... ಆ ಸಾವಿತ್ರಿನಂತೂ ಎದರಲ್ಲಂದ್ರೆ ಅದರಲ್ಲಿ, ಹೆಂಗಂದ್ರಂಗೆ ಹೊಡೀತಾಳೆ. ನನ್ಗೂ ಮೊನ್ನಿನಾಗೆ ಹಂಗೆ ಹೊಡಿದಿದ್ಲು....." "ಭೋಸುಡಿಮುಂಡೆ....." ಅವ್ವ ಒಮ್ಮೆಗೆ ಸಿಟ್ಟಿಗೆದ್ದಿದ್ದಳು. "ಅಲ್ಲೆ ಏನೋ ದೊಡ್ಡೋರು ಒಂದ್ನಾಕು ಮಾತೇಳಿದ್ರೆ, ಒಂದ್ ಹೊಡ್ತ ಹೊಡುದ್ರೆ ಅದ್ನೆ ದೊಡ್ಡದ್ ಮಾಡದಲ್ದೆ ತಲೆಸರಿಯಿಲ್ಲ ಅಂತ ಬೋಗಳ್ತಿಯಾ.... ? ಅದ್ಕೆ ನಾಲ್ಕ್ ದಿವಸಕ್ಕೆ ಕಿತ್ಕಂಡದೇ ಬಂದಿದೆ...." "ಅಯ್ಯೊ

ನಾನೇಳದ್ನ ಪೂರ್ತಿ ಕೇಳಜ್ಜಿ ಮೊದ್ಲು...... ಆಮ್ಯಾಕೆ ನೀನೆ ಹೇಳು ಅದ್ಯಾರ್ದು ತಪ್ಪೂ ಸರೀಂತ....." ಅದೇ ಸೆಡವಿನಲ್ಲಿದ್ದಳು ಅವ್ವ "ಅದೇನ್ ಬೊಗಳ್ತಿಯೋ ಬೊಗಳು...." ಅಂದಳು. ಸೊಸೆಯ ಪ್ರೀತಿ, ಆದರ ಅವಳ ಮನಸ್ಸು ತುಂಬಿ ನಿಂತಿದ್ದವು. ಎಷ್ಟೇ ಆಗ್ಲಿ ಇನ್ನೂ ಚಿಕ್ಕೊಯ್ಸು...... ನಾನಿಷ್ಟು ವಯ್ಸುಕಳ್ದೋಳು ಆ ಹುಡ್ಗಿನ ಅರ್ಥ ಮಾಡ್ಕಂಣ್ದಂಗೆ ಏನೇನೋ ಅಪಾರ್ಥ ತಿಳ್ಕಂಡಿದ್ನಲ್ಲಾ ಅಂತ ಪೇಚಾಡಿಕೊಂಡಿದ್ದಳು. ಅಂತದ್ರಲ್ಲಿ ಲಕ್ಷ್ಮಿ ಎರಡೇ ವಾರಕ್ಕೆ ಓಡಿಬಂದಾಗ ಸಿಟ್ಟು ತಾನಾಗಿಯೇ ಉಕ್ಕಿತ್ತು. ಅವಳಿನ್ನೂ ಸುಮ್ಮನೆ ಕುಳಿತಿದ್ದನ್ನು ಕಂಡು ಸಿಡುಕಿದಳು "ಅದೇನ್ ಬೊಗಳು ಅಂದ್ನೆಲ್ಲಾ......" ಲಕ್ಷ್ಮಿ ಬಾಯ್ಬಿಟ್ಟಳು. "ಅಜ್ಜಿ, ಅವತ್ತು ಗುರುವಾರ, ರಾತ್ರಿ ಆಗ್ಲೇ ಎರ್ಡು ಗಂಟೆ ಆಗಿತ್ತು. ನಾನು ದಿನಾಲು ಅವ್ರ ಕೋಣೆ ಹೊರ್ಗೆ ಮಲ್ಗತ್ತಿದ್ದೆ. ಅವತ್ತು ಇದ್ದಕ್ಕಿದ್ದಂಗೆ ಅಪ್ಪೊತ್ನಾಗೆ ಪಾಪ ಅಳಾಕತ್ತಿದ್ದ. ಅದರ ಜೊತ್ಯಾಗೆ ಸಣ್ಣಮ್ಮನ ಕಿರುಚಾಟ ಕೇಳಿಸ್ತಿತ್ತು. ನಡುನಡುವೆ ಸಣ್ಣಪ್ಪನೂ ಮಾತಾಡ್ತಿದ್ದ. ಎಷ್ಟೊತ್ತಾದ್ರು ಒಳ್ಗಿನ ಗದ್ಲ ನಿಲ್ಲೆ ಇಲ್ಲ. ನಾನು ಹೆದ್ರಿಕೊಂಡು ಎದ್ದೋಳೆ ಸೀದಾ ಹೋಗಿ ದಬದಬ ಅವ್ರ ಕೋಣೆ ಬಾಗ್ಲು ಬಡ್ದೆ. ಪಾಪ ಚೀರ್ಕಂತ್ಲೆ ಇದ್ದ. ನಾನು ಇನ್ನೂ ಜೋರಾಗಿ ಬಡಿಯಕತ್ತಿದೆ....... ಎಷ್ಟೊ ಹೊತ್ತಾದ್ಮೇಲೆ ಸಣ್ಣಪ್ಪ ಬಾಗ್ಲು ತಗ್ದು ಹೊರಕ್ಬಂದ...... ಅಜ್ಜೀ...... ಅವ್ನ ಮೈಮ್ಯಾಲಿನ ಅಂಗಿಯಲ್ಲಾ ಕಿತ್ತೋಗಿತ್ತು. ಮಗೂನ ಎತ್ಕಂಡು ಹೋಗು ಅಂತ ನನಗೇಳಿ ಸೀದಾ ಹೊರಕ್ಹೋದ ಸಣ್ಣಪ್ಪ. ಒಳ್ಗೆ ಸಣ್ಣ ದೀಪ ಉರೀತಾ ಇತ್ತು. ನಾನು ಬಾಗ್ಲ ಮೆಲ್ಲಗೆ ದಬ್ಬಿ ಒಳಕ್ಹೋದೆ ಯವ್ವಾ.......! ಕಣ್ಣಾಗ್ ನೋಡ್ಬಾರ್ದು ಅದ್ನ......" ಹೇಸಿಗೆಯಿಂದ ಮೈಯೆಲ್ಲ ಕೊಡವಿದಳು ಲಕ್ಷ್ಮಿ. ಅವ್ವನ ಕುತೂಹಲ ಏರುತ್ತಿತ್ತು. "ಮತ್ತೆ...... ಮತ್ತೆ..... ಆ ಕೋಣ್ಯಾಗೆ ಸಣ್ಣಮ್ಮ ಬೆತ್ತಲಿದ್ಲು...... ಮೈಮೇಲೆ ಒಂಚೂರು ಅರಿವೆಯಿರ್ಲಿಲ್ಲ. ಪಾಪನ್ನ ಬರೀ ನೆಲದ್ಮೇಲೆ ಉಲ್ಡಾಕಿದ್ಲು ಕಣಜ್ಜಿ ಕೆಳ್ಗೆ..... ಅದಂತು ವದರಾಡ್ತಿತ್ತು. ಆಯಮ್ಮನ ಅವತಾರ ನೋಡಿ ಮೈ ಜುಂ ಅಂದ್ರೂ ಆ ಮಗನ್ನ ಅಳು ಕೇಳ್ಲಾರ್ದೆ ಧೈರ್ಯಮಾಡಿ ಓಡೋಗಿ, ಮಗನೆತ್ಕಂಡು ಇನ್ನೇನು ಹೊರಗೆ ಬರ್ಬೇಕು ಆಕೆ ಮುಂದಿದ್ದ ಲೋಟ ಎತ್ಕಂಡು ಬೀಸಿ ಒಗದು ನೋಡು ಸಣ್ಣಮ್ಮ....... ನಾನು ಚೀರ್ಕಂಡು, ಆ ಹುಡ್ಗನ್ನು ಗಟ್ಯಾಗೆ ಅವಚ್ಕಂಡು ಓಟಕಿತ್ತೆ ಅಲ್ಲಿಂದ...." ಲಕ್ಷ್ಮಿ ಹೇಳುತ್ತಲೇ ಇದ್ದಳು. ಆದರೆ ಅವ್ವ ಗರಬಡಿದವ ಳಂತೆ ಕೂತಿದ್ದಳು. ಅಂದು ಅವಳಿಗರಿವಿಲ್ಲದೆ ಎದೆಯಲ್ಲಿ ಕಂಪನ ಹುಟ್ಟಿಸಿದ ಆ ಚಂಚಲಗಣ್ಣುಗಳು ಪಕ್ಕನೆದುರಾಗಿ ಅಲ್ಲಾಡಿಹೋದಳಾಕೆ. ಲಕ್ಷ್ಮಿ ಮಾತನಾಡು ತ್ತಲೇ ಇದ್ದಳು. "ಅಜ್ಜಿ...... ಸಾವಿತ್ರಿನೂ ಒಂದೆರ್ಡು ಸಾರಿ ಹಂಗೆ ನೋಡಿದಾ ಳಂತೆ....... ಪಾಪ! ಸಣ್ಣಪ್ಪ ಮೊದ್ಲೆ ಮೆತ್ತನನು, ನಿಧಾನಸ್ಥ ಆಯಮ್ಮನ ಅದೆಂಗೆ ನಿಭಾಯಿಸ್ತಾನೋ ಏನೋ....... ನಮ್ ಮನ್ದೇವ್ರಾಣೆಗೂ ಆಯಮ್ಮನಿಂದ ಸಣ್ಣಪ್ಪಗೇನೂ ಸುಖ ಇಲ್ಲ ಕಣಜ್ಜಿ..... ಅದ್ಕೆಯಾ....." ಅವ್ವ ಗಪ್ಪನೆ ಲಕ್ಷ್ಮಿಯ ಬಾಯನ್ನು ತನ್ನ ಕೈಗಳಿಂದ ಮುಚ್ಚಿದಳು. ಅವಳ ಒಂದೊಂದು ಮಾತು ನೇರವಾಗಿ ಅವಳ ಹೃದಯಕ್ಕೆ ಇರಿದು ಘಾಸಿಗೊಳಿಸುತ್ತಿದ್ದವು. ಬೆತ್ತಲಿದ್ದ

ಸಣ್ಣಮ್ಮ ಆಕೆಯಲ್ಲಿ ಅಸಹ್ಯವುಟ್ಟಿಸಿ, ಅಸಹಾಯಕ ಸಣ್ಣಪ್ಪ ಆಕೆಯಲ್ಲಿ ಕರುಣೆಯುಟ್ಟಿಸಿ ಮೇಲಿನ ಮಾತುಗಳನ್ನು ಆಡಿಸುತ್ತಿದ್ದರು. ಪ್ರಸ್ತುತ ಪರಿಸ್ಥಿತಿಯನ್ನು, ಅದರ ಗಂಭೀರತೆಯನ್ನು ತುಲನೆ ಮಾಡಿ ಅರ್ಥ ಮಾಡಿಕೊಳ್ಳುವಷ್ಟು ಬಲಿತವಳಲ್ಲ ಲಕ್ಷ್ಮಿ. ಆದರೆ ಅವ್ವನಲ್ಲಿ ಒಪ್ಪಿಕೊಳ್ಳ ಬಯಸದ ಕಹಿಸತ್ಯವೊಂದನ್ನು ಒಪ್ಪಿಕೊಳ್ಳಲೇಬೇಕಾದ ಅನಿವಾರ್ಯದ ಅರಿವು ಜಾಗ್ರತಗೊಳ್ಳುತ್ತಿತ್ತು. ಅದು ಆಕೆಯನ್ನು ಚುಚ್ಚುತ್ತಿತ್ತು. ಲಕ್ಷ್ಮಿಯು ಬಾಯೇನೋ ಮುಚ್ಚಿಸಿದ್ದಳು. ಆದರೆ ಸ್ವತಃ ಅವಳ ಅಂತರಂಗ ಹುಯಿಲಿಟ್ಟಿತ್ತು. ಇದೇ ಯೋಚನೆಯಲ್ಲಿದ್ದವಳು ಮನೆಗೆ ಬಂದ ಮಾಲಿಂಗನನ್ನು ಅದೇಕೊ ಹಿಂದಿನಂತೆ ಮುಖಕೊಟ್ಟು ಮಾತಾಡಿಸದಾದಳು. ಆದರೆ ಮಾಲಿಂಗ ಮಾತ್ರ ಇದ್ಯಾವುದನ್ನು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ವ್ಯಾಕುಲನಾಗಿದ್ದ ಅವನು "ಅವ್ವ ಮಗು ನೋಡಿಕೊಳ್ಳಕೆ ದಯವಿಟ್ಟು ಯಾರನ್ನಾದ್ರು ಹೊಂದಿಸ್ಕೊಡು...... ನನಗೆ ತುಂಬಾ ತೊಂದ್ರೆ ಆಗ್ಬಿಟ್ಟದೆ. ಅವ್ಳಿಗ್ನೋಡಿದ್ರೆ ಒಂದಿನ ಆರಾಮಿದ್ರೆ ಒಂದಿನ ಹಾಸ್ಗೆ ಹಿಡಿದ್ಬಿಡ್ತಾಳೆ..... ನಾನು ಆ ಮಗೂನ ನೋಡ್ಕಳ್ಲೊ ಆಫೀಸಿಗೋಗ್ಲೊ ಒಂದು ತೋಚ್ದಂಗಾಗಿದೆ......" ತನ್ನಳಲನ್ನು ತೋಡಿಕೊಂಡಿದ್ದ. ನೋವು ಮಿಳಿತವಾದ ಆ ಸ್ವರ ಭಾರವಾಗಿತ್ತು. ಅವ್ವ ತಡಮಾಡಲಿಲ್ಲ.

ಸುರಿಯುವ ಮಳೆಯಲ್ಲೆ ಪಕ್ಕದ ಪಂಚಳ್ಳಿಗೆ ಹೊರಟಳು. ಮಕ್ಕಳಿಲ್ಲದ ವಿಧವೆ ತಂಗಿ ಸಾಕವ್ವನನ್ನು ಕರೆತರಲು. ಪರಿಸ್ಥಿತಿಯ ಸೂಕ್ಷ್ಮ ವಿವರಣೆ ನೀಡಿ ಆಕೆಯನ್ನು ಒಪ್ಪಿಸಿದ್ದಳು. ಮಳೆ ಸುರಿಯುತ್ತಲೇ ಇತ್ತು "ಇದೆಂತಹ ಹುಚ್ಚು ಮಳೆ....." ಗೊಣಗಿದ್ದಳು ಅವ್ವ. "ಮೇಲ್ನೋಡಕ್ಕ ಅಲ್ಲಿ ಮೋಡ ಹೆಂಗೆ ಹೆಪ್ಪುಗಟ್ಕಂಡೈತೆ....... ಅದೆಲ್ಲ ಕರಗವರ್ಗೂ ಈ ಮಳೆ ಹಿಂಗೆ ಹುಚ್ಚು ಹಿಡ್ದಂಗೆ ಸುರೀತಾಲೇ ಇರೈತೆ...... ಆ ಮೋಡ ಕರಗ್ಬೇಕು ಆ ಮಳೆ ಶಮನ ಆಗ್ಬೇಕು...." ಸಾಕವ್ವನ ಮಾತಿಗೆ ನಿಟ್ಟುಸಿರಿಟ್ಟಳು ಅವ್ವ.

"ಈ ಜನುಮದ್ದಾಗೆ ಸಾಧ್ಯವಿಲ್ಲದ ಮಾತದು........" ತನಗೇ ತಾನು ಪಿಸುಗುಟ್ಟಿದ್ದಳು. ಆದರೆ ಸಾಕವ್ವನ ಕಿವಿ ಬಲು ಚುರುಕು. "ಅಯ್ಯ ಅದೇನ್ ಮಹಾ ಬಿಡಕ್ಕ ಇತ್ಲಾಗಿಂದ್ ಒಂದು ಗಾಳಿ ಎದ್ರೆ ಅತ್ಲಾಗ್ ಹೊಡ್ಕಂಡು ಹೋಗ್ಬೈತೆ ಮೋಡನೆಲ್ಲಾ....." ಎಂದಳು. ಆ ಮಾತಿಗೊ, ಓಡುವ ಬಸ್ಸಿನಿಂದ ಒಳಕ್ಕೆ ನುಗ್ಗುತ್ತಿದ್ದ ಗಾಳಿಯ ಹೊಡೆತಕ್ಕೊ ಅವ್ವ ಗಡಗಡ ನಡುಗುತ್ತ ಸೆರಗನ್ನು ಎಳೆದು ಗಟ್ಟಿಯಾಗಿ ಹೊದ್ದುಕೊಂಡಿದ್ದಳು.

ಹೇಳಿದ ಸಮಯಕ್ಕಲ್ಲದೆ ಹೋದರು ತಡವಾಗಿಯಾದರೂ ತೆಂಗಿನ ಸಸಿಗಳು ಬಂದಿಳಿದವು. "ಚಂದ್ರಣ್ಣರೇ ತಗಂಡು ಬರ್ಬೇಕಂತ ಇದ್ರು ಅದ್ಕೆ ತಡ ಆಯ್ತು...... ಅವ್ರಿಗೇನೋ ಅರ್ಜೆಂಟ್ ಕೆಲ್ಸ ಬಂತು ಅಂತ ಯಾವ್ದೊ ಊರಿಗೆ ಹೊಂಟಾದ್ರು...... ನಾವೇ ತಗಂಡು ಬಂದ್ವಿ......" ಎಂದ ಸಸಿ ತಂದ ಆಳು.

ಚಂದ್ರ ಎಂದೊಡನೆ ಮೊಮ್ಮಗನ ರೂಪ ತಟ್ಟನೆ ಕಣ್ಣೆದುರಿಗೆ ಬಂತು. "ಚಂದ್ರ ಎಂದರೆ ಸಾಕ್ಷಾತ್ ಚಂದ್ರನೇ....." ಎಲ್ಲರೆದುರು ಹೇಳುತ್ತಿದ್ದಳು ಅವ್ವ "ನಮ್ ಚಂದ್ರನದು ಬೆಳದಿಂಗಳ ವೈ ಬಣ್ಣ....." ಎಂದು. ಆದರೆ ಅದೇ ನಳಿನಳ ವಿಷಯಕ್ಕೆ ಬಂದರೆ ಅಷ್ಟೆ ಹಿಂಜರಿಯುತ್ತಿದ್ದಳು. ಇವನು ಬೆಳದಿಂಗಳಾದರೆ ಆಕೆ ಕಗ್ಗತ್ತಲು. ನೆನಪಾದರೆ ಸಾಕು ಬರೀ ನಿಟ್ಟುಸಿರೇ. ನಿಟ್ಟುಸಿರು !

ಚಂದ್ರನಿಗೆ ಮೂರು ವರ್ಷ ತುಂಬಿದಾಗ ಜವಳ ತೆಗೆಸಲು ಊರದೇವರಿಗೆ ಬಂದ ಮಾಲಿಂಗನ ಪರಿವಾರದ ಜತೇಲೆ ಅವನ ಇಬ್ಬರು ಸ್ನೇಹಿತರೂ ಇದ್ದರು. ಒಟ್ಟಾಗಿ ಕಾಲೇಜಿನಲ್ಲಿ ಕಲಿತವರೂ, ಒಂದೇ ಕೋಣೆಯಲ್ಲೆ ಇದ್ದವರೂ ಎಂದಿದ್ದ ಮಾಲಿಂಗ, ಮಂಜುನಾಥ ಬಲು ಸಂಕೋಚದ ಮಿತಭಾಷಿ. ಮೈಸೂರಿನಲ್ಲಿ ಕೆಲಸ. ಇನ್ನೊಬ್ಬ ಶ್ರೀನಿವಾಸ ಅಷ್ಟೆ ಮಾತುಗಾರ. ಬೀದರ್‌ನಿಂದ ಇದೀಗ ಬೆಂಗಳೂರಿಗೆ ವರ್ಗವಾಗಿ ಬಂದಿದ್ದವ. ನೋಡಲು ಲಕ್ಷಣವಾಗಿದ್ದರೂ ಬಣ್ಣ ಮಾತ್ರ ತೊಳೆದ ಕೆಂಡ. ಹೆಚ್ಚು ಮಾತನಾಡದ, ಯಾರೊಂದಿಗೂ ಬೆರೆಯದ ಗಂಟು ಮುಖದ ಕಮಲಮ್ಮನನ್ನೂ ಬಿಡದೆ ಛೇಡಿಸುತ್ತ, ರೇಗಿಸುತ್ತ ಆಕೆಯನ್ನು ಮಾತಿಗೆಳೆಯಲು ಪ್ರಯತ್ನಿಸುತ್ತಿದ್ದ. ಅವ್ವನಿಗೋ ಒಳಗೇ ನಡುಕ. ಅವನ ಗ್ರಹಚಾರಕ್ಕೊ, ನಮ್ಮ ಗ್ರಹಚಾರಕ್ಕೊ ಸೊಸೆ ರೇಗಿ ರಂಪ ತೆಗೆದರೆ ಇಡೀ ವಾತಾವರಣವೇ ಗಬ್ಬೆದ್ದು ಹೋಗುತ್ತಿತ್ತು. ಆದರೆ ಹಾಗಾಗಲಿಲ್ಲ ಅವ್ವ ನಿರೀಕ್ಷೆ ತಲೆಕೆಳಗಾಗುವಂತೆ ಶ್ರೀನಿವಾಸನೊಡನೆ ಮಾತಿಗೆ ತೊಡಗದಿದ್ದರೂ ಅವನ ಮಾತುಗಳಿಗೆ ಮುಗುಳ್ನಗುತ್ತ ಸ್ವಾಗತಿಸುತ್ತಿದ್ದಳು. ಅವ್ವನಿಗೆ ನಿರಾಳವೆನಿಸಿತು. ಊರಿಂದ ಬಂದ ಸಾಕವ್ವ ಬೇರೆ ಅವ್ವನ ಗಾಯಕ್ಕೆ ಉಪ್ಪು ಸುರಿದಿದ್ದಳು "ನಿನ್ ಹತ್ರ ಎನ್ ಮುಚ್ಚುಮರೆಯಕ್ಕ ಆ ಹುಡ್ಗಿನ ಸಂಪಾಳ್ಸದು ನಮ್ ಮಾಲಿಂಗನ್ನೈಯಾಗೆ ಆಗದ್ ಕೆಲ್ಸ...... ಪುಣ್ಯವಿಲ್ದ್ ಗಂಡ ಹಿಂದ್ ಮಲ್ಗಿದ್ರೇನ್ ಮುಂದ್ ಮಲ್ಗಿದ್ರೇನ್ ಅನ್ನಂಗೆ ಐತೆ ಅಲ್ಲಿ ಪರಿಸ್ಥಿತಿ. ಇವ್ನು ಆಗೊತ್ಗೆ ಎಲ್ಲಾ ಸೈಸಿಕೊಂಡು ಹೋಗ್ತವನೆ ನೋಡು ಬ್ಯಾರೆ ಯಾರನ ಆಗಿದ್ರೆ ಇಟೊತ್ಗೆ ಅವ್ಳ ಚೆಂಡುತಿರ್‍ವಿ ಕೆರೆಬಾವಿ ಪಾಲು ಮಾಡ್ತಿದ್ರು..... ಅದಕ್ಕೆ ಸರಿಯಾಗಿ ನೀನಿದಿ. ಮೊದ್ಲೆ ಮಾಲಿಂಗ ಮೆತ್ತನನು ಕಣಕ್ಕ ನೀನೂ ಹಿಂಗೆ ಸಂಬಂಧ ಇಲ್ದಳಂಗಿದ್ರೆ ಎನ್ಗತಿ.......?" ಎಂದಿದ್ದಳು. ಅವಳ ಮಾತಿಗೆ ಅವ್ವನ ಎದೆಯಲ್ಲಿ ದೊಡ್ಡ ಗದ್ದಲವೇ ಎದ್ದಿತ್ತು. ಎಲ್ಲರೂ ಮಗನನ್ನು ಮೆತ್ತನನು, ನಿಧಾನಸ್ತ ಎಂದು ಕೊಂಡಾಡುತ್ತಲೇ ಹೀಯಾಳಿಸುತ್ತಿರುವಂತೆ ತೋರುತ್ತಿತ್ತು. ಏನೇ ಆದರು ಸೊಸೇನ ಪ್ರಶ್ನಿಸಿ, ವಿಚಾರಿಸುವ ಧೈರ್ಯ, ಎದೆಗಾರಿಕೆ ಅವ್ವನಿಗಿರಲಿಲ್ಲ. ಆದರೆ ಈ ಬಾರಿ ಸೊಸೆ ಯಾವ ಗಲಾಟೆಯೂ ಇಲ್ಲದೆ ನಗುಮುಖ ಹೊತ್ತು ಓಡಾಡುವುದನ್ನು ನೋಡಿ "ಕಾಲಕ್ರಮೇಣ ಎಲ್ಲಾ ಸರಿಹೋದೀತು....." ಎಂದುಕೊಂಡಿದ್ದಳು. ಈ ಸರ್ತಿ ಹೋದ ಸಾಕವ್ವ ತಿರುಗಿ ಬಂದದ್ದು ಮೂರು ತಿಂಗಳ ನಂತರ. "ಅಯ್ಯೊ ನಿನ್ ಸೊಸೆ ಈಗ ಕಾರು ಓಡ್ಸಾದನ್ನ ಕಲಿತದಳೆ ಕಣವ್ವ..... ಅದ್ಕೆ ಆ ಹುಡ್ಗನ್ನ ನೋಡ್ಕಂಡಿರು ಅಂತ

ಎನ್ಮಾಡಿದ್ರು ನನ್ನ ಬಿಡ್ಲಿಲ್ಲ......" ಎಂದು ಮೂಗುಮುಸುಡಿ ತಿರುವಿದಳು. ಅದನ್ನು ಗಮನಿಸದವಳಂತೆ ಅವ್ವ ಆಶ್ಚರ್ಯದಿಂದ "ಕಾರ್ ಓಡ್ಸಾದಾ.....?" ಎಂದು ಕಣ್ಣಗಲಿ "ಮಾಲಿಂಗಂದು ಕಾರಿಲ್ಲ, ಅವ್ನಿಗದು ಬರಾದಿಲ್ಲ ಯಾರ್ ಕಲುಸ್ತಾರೆ......?" ಎಂದು ಕೇಳಿದ್ದಳು. ಸಾಕವ್ವನದು ಅದೇ ವ್ಯಂಗ್ಯ "ಅಯ್ಯ ನಿನ್ ಮಗುನ್ಗೆ ಬರ್‍ಬಕೇನೂ.....? ಆಯಪ್ಪದನಲ್ಲ ಶ್ರೀನಿವಾಸ....... ಆತ ಕಲುಸ್ತಾನೆ......" ಆದರೆ ಅವ್ವನದು ಅದೇ ಅಚ್ಚರಿಯ ಪ್ರಶ್ನೆ "ಅವ್ನ ಹತ್ರ ಕಾರೈತೇನೂ....?" "ಅದ್ಕೆಯಲ್ವಾ ಹಗಲು ರಾತ್ರಿ ಪರ್‍ರೊ ಅಂತ ನಿನ್ ಸೊಸೆ ತಿರುಗಾದು...... ಹೇಳಾರು ಕೇಳಾರು ಇಲ್ದಿದ್ಮಾಕೆ ಹಾಗೆಯೆ ಮತ್ತೆ......" ಅವಳ ವ್ಯಂಗ್ಯ ತಿವಿದರೂ ತೋರ್ಪಡಿಸಿಕೊಳ್ಳದೆ "ಏನೋ ಅವ್ರೆಲ್ಲ ನಕ್ಕಂತ ಖುಷಿಯಾಗಿದ್ರೆ ಅಷ್ಟೆ ಸಾಕ್ಬಿಡು....." ಎಂದು ಹೇಳಿ ತಂಗಿಯನ್ನು ಸಾಗಾಕಿದ್ದಳು. ಹೆಂಗನ ಇರ್‍ಲಿ ಏನನ ಮಾಡ್ಲಿ ಒಟ್ನಾಗೆ ಗಂಡಹೆಂಡ್ತಿ ಹೊಂದ್ಕಂಡು ನೆಮ್ಮದಿಯಾಗಿ ಬದುಕಿದರೇ ಸಾಕೆಂದುಕೊಳ್ಳುತ್ತಿದ್ದಳು. ಕಳೆಗೆಟ್ಟ ಮಾಲಿಂಗನ ಮುಖ ಅವಳಿಂದ ನೋಡಲು ಆಗುತ್ತಿರಲಿಲ್ಲ. ಆದ್ದರಿಂದಲೇ ಹೇಗಾದರೂ ಸರಿ ಅವರಿಬ್ಬರು ಸರಿಹೋದರೆ ಸಾಕು ಎಂಬುದು ಅವಳ ಆಶೆಕೆ. ಅಂತೆಯೇ ಆಯ್ತು. 'ಕಮಲಮ್ಮ ಮತ್ತೆ ನೀರೊಯ್ಕಂಡಾಳೆ....' ಎಂಬ ಸುದ್ದಿ ಬಂತು ಬೆಂಗಳೂರಿಂದ. ನಾಲ್ಕು ದಿಕ್ಕಿಗೂ ಕೈಮುಗಿದು ತನ್ನ ಕೃತಜ್ಞತೆ ಅರ್ಪಿಸಿದ್ದಳು ದೇವರಿಗೆ ಅವ್ವ.

ಸೊಸೆ ಹೆಣ್ಣುಮಗುವಿಗೆ ಜನ್ಮವಿತ್ತ ಸುದ್ದಿ ಬಂದೊಡನೆ ತಡಮಾಡಲಿಲ್ಲ ತಕ್ಷಣವೆ ಹೊರಟುಬಿಟ್ಟಳು. ಸಂಭ್ರಮದಿಂದ ಹೋದ ಅವ್ವನಿಗೆ ಸಿಡಿಲುಬಡಿದಂತಾಗಿತ್ತು ಮಗುವನ್ನು ನೋಡಿ. ಕಡುಕಪ್ಪಿನ ಮಗುವಿನ ಅಳು, ಆಟ ಯಾವುದೂ ಅವಳ ಮನ ಮುಟ್ಟಲಿಲ್ಲ. ತಡೆಯಲಾರದೆ ಎಲ್ಲರೆದುರೇ ಆಡಿಬಿಟ್ಟಳು "ಅಲ್ವೊ ನಮ್ ವಂಶದಾಗೆ ಇಷ್ಟು ಕರ್‍ರಗಿರಾರು ಯಾರೂ ಇಲ್ಲಪ್ಪ..... ಇದೆಲ್ಲಿಂದ ಇಷ್ಟು ಕರ್‍ರಗುಟ್ಟು.....? ನೋಡು, ನೋಡು ಒಂದ್ಸಾರಿ ಆ ಡಾಕ್ಟ್ರನ್ನ ಸರಿಯಾಗಿ ಕೇಳ್ನೋಡು...... ಇತ್ತಿತ್ಲಾಗೆ ಆಸ್ಪತ್ರೆಗುಳಾಗೆ ಒಳ್ಳೊಳ್ಳೆ ಮಕ್ಳನ್ನ ಅದ್ಲುಬದ್ಲು ಮಾಡ್ತರಂತೆ..... ಹಂಗೇನೋ ಆಗಿರ್‍ಬೇಕು ಕಣ ಈ ಮಗು ನಮ್ಮದು ಆಗಾಕೆ ಸಾಧ್ಯವೇ ಇಲ್ಲ...." ಮಾಲಿಂಗ ತಕ್ಷಣ ಅವ್ವನನ್ನು ಹೊರಕ್ಕೆಳೆದು "ಎಲ್ಲಾನುಂಟೇನವ್ವ ಮಕ್ಳುನ ಅದ್ಲುಬದ್ಲು ಮಾಡದು ಅಷ್ಟು ಸುಲಭ ಅಂತ ತಿಳ್ಕಂಡಿಯೇನು.....? ನೋಡು, ಕಮಲನ ಮುತ್ತಜ್ಜಿ ಎಲ್ಲಾ ಹಿಂಗೆ ಅಂತ ಇದ್ದಿದ್ದು.... ಅವ್ರೆಲ್ಲಾ ನಮ್ಮಜ್ಜಿ ಇದ್ದಂಗೇ, ನಮ್ಮುತ್ತಜ್ಜಿ ಇದ್ದಂಗೇ ಅಂತ ಖುಷಿಯಾಗಿರ್‍ಬೇಕಾರೆ ನೀನು ಸುಮ್ನೆ ಏನೇನೋ ಅವರೆದ್ರುಗೆ ಮಾತಾಡ್ಬೇಡ ದಯವಿಟ್ಟು...." ಮಗ ಗಂಭೀರವಾಗಿ ಹೇಳಿದಾಗ ಅವ್ವ ಬಂದ ದಾರಿಯಲ್ಲೇ ಹಿಂದಿರುಗಿದ್ದಳು. ಮಾಲಿಂಗ ಬದಲಾಗಿದ್ದ.

ಮಗಳು ಬೆಳೆದಂತೆಲ್ಲ ಅವನು ಹೆಚ್ಚು ಗಂಭೀರನಾಗುತ್ತ ಹೋದ. ಹೊರಗಿನ ಸಂಪರ್ಕ ಕಡಿಮೆಯಾಯ್ತು. ಸದಾ ತಾನು, ತನ್ನ ಮಗಳು ಹೆಂಡತಿ ಎಂಬಂತಿ

ರುತ್ತಿದ್ದ. ಊರಿಗೆ ಹೋಗುವುದಿರಲಿ ಪತ್ರ ಬರೆಯುವುದನ್ನೂ ನಿಲ್ಲಿಸಿದ್ದ! ಏನೇ ಸುದ್ದಿಯಿದ್ದರೂ ಅದು ಸಾಕವ್ವನಿಂದಲೇ ಗೊತ್ತಾಗಬೇಕಿತ್ತು. ಅವರು ಹೊಸ ಕಾರೊಂದನ್ನು ಕೊಂಡಿರುವುದು, ಅದಕ್ಕೆ, ಶ್ರೀನಿವಾಸನೇ ದುಡ್ಡು ಕೊಟ್ಟಿರಬೇಕೆಂಬ ಗುಮಾನಿ ತನಗಿರುವುದು; ಅವನು ಬೇರೆ ಕಡೆಗೆ ವರ್ಗವಾಗಿ ಹೋದದ್ದೂ, ನಳಿನ ಅಪ್ಪ ಅಮ್ಮನ ಕಣ್ಮಣಿಯಾಗಿ ಬೆಳೆಯುತ್ತಿರುವುದು; ಚಂದ್ರುವನ್ನು ಬೇರೆ ಊರಿನ ಬೋರ್ಡಿಂಗ್ ಶಾಲೆಯಲ್ಲಿ ಬಿಟ್ಟಿರುವುದು; ಕಮಲಮ್ಮ ಮುಂಚಿನಂತಿರದೆ ಸದಾ ಗೆಲುವಾಗಿ ಸಮಾಧಾನದಿಂದ ಇರುವುದು, ಮಾಲಿಂಗ ಹೆಂಡತಿ ಮಗಳಿಗೆ ಅಂಟಿಕೊಂಡೇ ಇರುವುದು..... ಏನೊಂದು ಸಾಕವ್ವ ಮುಚ್ಚಿಡುತ್ತಿರಲಿಲ್ಲ. "ಹೆಂಗೋ ಬಿಡು ಆ ಹುಡ್ಗಿ ಕಾಲ್ಗುಣದಿಂದ ಸದ್ಯ ಆಕೆ ಹುಚ್ಚು ಬಿಟ್ಟು ಮನುಷ್ಯಳಾದ್ಲಲ್ಲ ಅಷ್ಟೆ ಸಾಕು....." ನಿಡುಸುಯ್ದು ಹೇಳಿದ್ದಳು ಅವ್ವ. "ಅಯ್ಯ ಹುಚ್ಚು ಬಿಡ್ದಂಗೇನವ್ವ.....? ಒಂದೇ ವರ್ಷದಾಗೆ ಹುಚ್ಚೆಲ್ಲ ಕಿತ್ಕಂಡೋಗೈತೆ ನೋಡು....." ಸಾಕವ್ವನದು ಅದೇ ಕೊಂಕು ಮಾತುಗಳು. ಆದರೆ ನಳಿನಳ ಮದುವೆ ಮುಗಿದೊಡನೆ ದಿಢೀರನೆ ಬದಲಾಗಿದ್ದ ಮಾಲಿಂಗ ಹೊಸ ಮನುಷ್ಯ ನಾಗಿದ್ದ ಅವನು ಅವ್ವನಿಗೆ ಒಂದು ಒಗಟಿನಂತೆ ತೋರುತ್ತಿದ್ದ.

ತಂಗಿನಸಸಿ ಕಳುಹಿಸಿ, ಬರುತ್ತೇನೆಂದಿದ್ದ ಮಾಲಿಂಗ ತಿಂಗಳಾದರೂ ಇತ್ತ ಬರಲಿಲ್ಲ. ಅವನ ಬದಲು ಸಾಕವ್ವನನ್ನು ಕಳುಹಿಸಿದ್ದ. "ಮಗಳು ಅಳಿಯನ್ನ ಅದ್ಯಾವ್ದೊ ದೇಸಕ್ಕೆ ಕಳುಸ್ತಾರಂತವ್ವ ಅದ್ಕೆ ಓಡಾತ್ನವ್ನೆ ನಿನ್ ಮಗ........ ಮುಂದಿನ್ವಾರ ಅವರ್ನ ಕಳುಸಿ ಬರ್ತೀವಿ ಅಂತ ಹೇಳು ಅಂದ......" ಹೋಗುವ ಮೊದಲು ಒಮ್ಮೆ ಅಜ್ಜಿಯನ್ನು ತೋರಿಸುವ ಇಚ್ಛೆಯೂ ಮಾಲಿಂಗನಿಗೆ ಇಲ್ಲ ವಾಯ್ತೆ......? ಎಂದು ಬೇಸರಗೊಂಡಳು ಅವ್ವ. ಊರಿಗೆ ಹೊರಡುವ ಮುನ್ನ ಸಾಕವ್ವ ಅನುಮಾನಿಸುತ್ತ ಕೇಳಿದಳು "ಅಕ್ಕ ನಮ್ಮಮ್ಮನ ಕಡೆ ಯಾರೋ ಭಾಳ ಕರ್ರಗಿದ್ರಂತಲ್ಲ ಯಾರೆ ಅದು.....?" ಅದಕ್ಕುತ್ತರಿಸುವ ಬದಲು ಅವ್ವ ಮರು ಪ್ರಶ್ನೆ ಹಾಕಿದಳು "ಈಗ್ಯಾಕೆ ಆ ವಿಷ್ಯ.....? ಯಾರೇಳಿದ್ರು ನಿನ್ಗೆ.....?" "ಮೊನ್ನೆ ಗಂಡಿನ್ಕಡೇರು ನೀವಿಬ್ರೂ ಇಷ್ಟು ಬೆಳ್ಳಗಿದ್ದೀರಾ ನಳಿನ ಯಾಕಷ್ಟು ಕಪ್ಪು? ಯಾರಂಗಿದ್ದಾಳೆ ಅವ್ಳು.....? ಅಂತ ಕೇಳಿದ್ರೇಳು....... ಅವಾಗ ಮಾಲಿಂಗ ಹಂಗಂದ. ಎಲ್ಲಾ ನಮ್ಮವ್ವನ ಅಜ್ಜಿಯಂಗೆ ಅವ್ಳು..... ನಮ್ಮನ್ಯಾಗೆ ಆಕೀನ ಬಿಟ್ರೆ ಮತ್ತೆ ಇವ್ಳೆ ಇಷ್ಟು ಕಪ್ಪು ಅಂದ್ನವ್ವ....... ಏನೋ ಬಿಡು ಬರ್ತ್ನಾ....."? ಎಂದು ಹೊರಟು ಹೋದಳು ಸಾಕವ್ವ. ಆದರೆ ಅವ್ವ ನಿಂತಲ್ಲೆ ಕುಸಿದಿದ್ದಳು. ಮುದ್ದೆ ನೀರು ಸೇರದಾಯ್ತು. ಮಗನ ಸುಳ್ಳಿಗೆ ಕಾರಣ ಹುಡುಕುವ ಜಂಜಾಟದಲ್ಲಿ ನಲುಗಿದಳು. ಕಣ್ಮುಚ್ಚಿದರೆ ಸಾಕು ಸ್ವಪ್ನಗಳು..... ಬರೀ ಸ್ವಪ್ನಗಳು..... ಎಲ್ಲಾ ಅಸಂಬದ್ಧ ಸ್ವಪ್ನಗಳೇ......

ಸಾಕವ್ವನ ಬಾಯಲ್ಲಿ ಅಜೀರ್ಣ ಆಗುವಷ್ಟು ವರ್ಣಿಸಲ್ಪಟ್ಟ ಆ ನಾಲ್ಕು ಗಾಲಿಯ ಬಂಡಿ ಆಗಾಗ ನಿದ್ದೆಯಲ್ಲಿ ಕಾಣಿಸುತ್ತಲೇ ಇತ್ತು. ಇಂದು ಹಾಗೆಯೇ

ಆದರದು ಬೃಹದಾಕಾರ ತಾಳಿ ನಿಂತಿತ್ತು. ಆ ನಾಲ್ಕು ಗಾಲಿಗಳು ಕೈಕಾಲುಗಳ ರೂಪ ತಳೆದಿದ್ದವು. ಅಬ್ಬಾ! ಅದೇನು ವೇಗ........ ಅದೇನು ರಭಸ...... ಅದೆಂತಹ ಶಕ್ತಿ...... ನೋಡುನೋಡುತ್ತಿದ್ದಂತೆಯೇ ಬಂಡಿಯ ಕೈಗಳು ಉದ್ದುದ್ದ ಚಾಚಿಕೊಳ್ಳುತ್ತ ಲಕ್ಷ್ಮಿ ಹೇಳಿದ್ದ ಸೊಸೆ ಬೆತ್ತಲಿದ್ದ ಆ ಕೋಣೆಯತ್ತ ಸಾಗಿ, ಗಬಕ್ಕನೆ ಏನನ್ನೊ ಹಿಡಿದಿದ್ದವು. ಕಣ್ಣಗಲಿಸಿ ನೋಡಿದರೆ ಆ ಕೈಗಳಲ್ಲಿ ಬೆತ್ತಲಿರುವ ತನ್ನ ಸೊಸೆ! ಒಂದೇ ಕ್ಷಣ ಆಕೇನ ತನ್ನೊಳಕ್ಕೆ ಸೆಳೆದುಕೊಂಡು ಕಣ್ಮರೆಯಾಗಿ, ದಿಗ್ಭ್ರಾಂತಳಾಗಿ ಅವ್ವ ತಡಕಾಡುತ್ತಿದ್ದಂತೆ ಮತ್ತೆ ಫಕ್ಕನೆ ಪ್ರತ್ಯಕ್ಷವಾಗಿತ್ತು. ಆದರೆ ಆ ಕೈಗಳಲ್ಲಿ ಸೊಸೆಯಿರದೆ ಬೆತ್ತಲಿದ್ದ ಕಡುಕಪ್ಪು ಬಣ್ಣದ ಸಣ್ಣ ಮಗುವೊಂದಿತ್ತು. ಅವ್ವನ ಮುಂದಕ್ಕೆ ಚಾಚಿದ್ದವು ಮಗುವನ್ನು ಹಿಡಿದಿದ್ದ ಆ ಕೈಗಳು.

ಅವ್ವ ನಡುಗುತ್ತಿದ್ದಳು. ಉಟ್ಟ ಬಟ್ಟೆಯೆಲ್ಲಾ ಬೆವರಿನಿಂದ ತೊಯ್ದು ಮೈಗೆ ಅಂಟಿಕೊಂಡಿದ್ದವು. ಕತ್ತಲಲ್ಲಿ ಕಣ್ಣಗಲಿಸಿ ಕಂಬದಂತೆ ಕೂತಿದ್ದಳು. ಬೆಳಕಿನಲ್ಲಿ ಹುದುಗಿ ಮರೆಯಾಗಿದ್ದ ನಿಗೂಢವೊಂದು ಕತ್ತಲಲ್ಲಿ ಗೋಚರಿಸಿತ್ತು!

ನೀಲಿ ಛಾಯೆಯೂ ಕಾಣದಂತೆ ಕಪ್ಪನೆಯ ಮೋಡ ಹೆಪ್ಪುಗಟ್ಟಿ ಎರಡು ದಿನದಿಂದ ನಿಲ್ಲದೆ ಮಳೆ ಸುರಿಸುತ್ತಲೇ ಇತ್ತು. ಅವ್ವ ತೋಟಕ್ಕೂ ಹೋಗದೆ, ಎರಡು ದಿನದಿಂದ ದುಪ್ಪಟಿ ಹೊದ್ದು ಒಲೆಯ ಮುಂದೆ ಕೊಳ್ಳಿ ಚಾಚುತ್ತ ಕೂತಿದ್ದಳು. ಬೆಳಿಗ್ಗೆ ಮಲ್ಲಯ್ಯ ಮಗಳ ಮನೆಯಲ್ಲಿ ಪಾಲಾಕಿದ್ದ ಮಾಂಸವನ್ನು ತಂದುಕೊಟ್ಟಿದ್ದ. ಒಲೆ ಮೇಲೆ ಅದು ಬೇಯುತ್ತಿತ್ತು. ಬೆಂದ ಮಾಂಸದ ವಾಸನೆ ಗಮ್ಮನೆ ಹರಡುತ್ತಿದ್ದಂತೆ ಹೊರಗೆ ಕಾರು ನಿಂತ ಶಬ್ದವಾಯ್ತು. ಅರೆಬರೆ ನೆನೆಯುತ್ತಲೇ ಒಳಬಂದರು ಮಾಲಿಂಗ, ಕಮಲವ್ವ ಮತ್ತು ಸಾಕವ್ವ ಅವ್ವನ ಕಣ್ಣುಗಳು ಕಮಲಮ್ಮನನ್ನು ಅಳೆಯುತ್ತಿದ್ದವು. "ಚೆನ್ನಾಗಿದ್ದೀರಾ ಅತ್ತೆ.......?" ಎಂದು ನಕ್ಕಿದ್ದಳು...... ಗಂಡನೊಡನೆ ಕೂತು ಉಣ್ಣುತ್ತ ನಗುತ್ತಿದ್ದಳು...... ಅಡುಗೆಮನೆಯಲ್ಲಿ ಎಂದೂ ಮಾತನಾಡದ ಅಕ್ಕಂದಿರೊಡನೆ ಹರಟೆ ಹೊಡೆಯುತ್ತ ನಗುತ್ತಿದ್ದಳು..... ಮಗಳು ನಳಿನಳ ಮೇಲಿನ ಅತಿಶಯವಾದ ಪ್ರೀತಿ; ಆಕೆ ಹುಟ್ಟಿದಾಗಿಂದ ಹೊರಗಿನ ಪ್ರಪಂಚದೊಡನೆ ಕಡಿದ ಸಂಪರ್ಕ; ಹೆತ್ತವ್ವನನ್ನೂ, ಹುಟ್ಟಿದೂರನ್ನೂ ದೂರ ಮಾಡಿಕೊಂಡು ಸದಾ ಮಗಳಿಗೆ ಬೆಂಗಾವಲಿನಂತೆ ಓಡಾಡುತ್ತಿದ್ದ ಮಗನ ಹೊಸಪರಿ ಎಲ್ಲಕ್ಕೂ ಆ ನಗುವಿನಲ್ಲಿ ಉತ್ತರವಿತ್ತು. ಎರಡು ದಿನದಿಂದ ಕಾರ್ಮೋಡ ಹೆಪ್ಪುಗಟ್ಟಿ ನಿಂತಿತ್ತು ಎಂಬುದನ್ನು ನಂಬಲೂ ಆಗದಷ್ಟು ಆಗಸ ನಿಚ್ಚಳವಾಗಿ ಮಿನುಗುತ್ತಿತ್ತು. ಮಳೆಯೂ ನಿಂತು ವಾತಾವರಣ ಪ್ರಶಾಂತವಾಗಿದ್ದು ಮನಕ್ಕೆ ಆಹ್ಲಾದವುಂಟುಮಾಡುತ್ತಿತ್ತು. "ನೋಡಕ್ಕ ನಿನ್ನೆನಾಗ ನಾವು ಬಂದಾಗಿನ್ನೂ ಮಳೆ ಸುರೀತಿತ್ತು....... ಮೋಡ ಅಡರ್ಬಿಟ್ಟಿತ್ತು...... ಇವತ್ತಾಗ್ಲೆ ಮಳೆ ಬಂದಿತ್ತೊ ಇಲ್ಲೊ ಅನ್ನಷ್ಟು ನಿಚ್ಚಳಾಗೈತೆ ನೋಡು....." ಸಾಕವ್ವ ಮಾತಾಡುತ್ತಲೇ ಇದ್ದಳು...... ಕಮಲಮ್ಮ ನಗುತ್ತಲೇ ಇದ್ದಳು.......

***

# ಕಳೆದುಕೊಂಡವಳು

ಕೈಯಲ್ಲಿದ್ದ ಬ್ಯಾಗನ್ನು ಹಾಸಿಗೆಯ ಮೇಲೆ ಕುಕ್ಕಿ, ಬಚ್ಚಲಿನತ್ತ ಓಡಿದಳು ರಾಜಿ. ಅವಳು ಬರುವುದಕ್ಕೆ ಕಾಯುತ್ತ, ಬಸ್ಸಿನ ಕುಲುಕಾಟದಿಂದ ದಣಿದಿದ್ದ ದೇಹವನ್ನು ಆರಾಮ ಕುರ್ಚಿಯಲ್ಲಿ ಒರಗಿಸಿದಳು ಕೀರ್ತಿ. ಬೆಂಗಳೂರಿನ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿದ್ದಳಾಕೆ. ಬೆಂಗ್ಳೂರಿಗೆ ಹೋಗಿದ್ದ ರಾಜಿ ದಸರ ರಜೆಯಲ್ಲಿ ಒಂದು ವಾರವನ್ನಾದರೂ ತನ್ನೊಡನೆ ಕಳೆಯಲೇಬೇಕೆಂದು, ಗೆಳತಿ ಯೊಡನೆ ಸಣ್ಣ ಸಮರವನ್ನೆ ಹೂಡಿ ಕಡೆಗೂ ಅವಳನ್ನು ಕರೆತರುವಲ್ಲಿ ಸಫಲಳಾಗಿದ್ದಳು. ಚಿತ್ರದುರ್ಗ ಕೀರ್ತಿಯ ತವರೂರು. ನಾಲ್ಕು ವರ್ಷಗಳ ಹಿಂದೆ ಊರನ್ನು ಬಿಟ್ಟಿದ್ದವಳು ಮತ್ತೆ ಇಂದೇ ಕಾಲಿಟ್ಟಿದ್ದು.

ರಾಜಿ ಬಂದೊಡನೆ ತಾನು ಬಚ್ಚಲಿನತ್ತ ಹೊರಟಿದ್ದು, ಮುಂಬಾಗಿಲಿನಿಂದ ಬಿರುಗಾಳಿಯಂತೆ ಒಳನುಗ್ಗಿದವನನ್ನು ಕಂಡು ಆಶ್ಚರ್ಯದಿಂದ ಕಣ್ಣರಳಿಸಿದಳು ಕೀರ್ತಿ. ತನ್ನ ಚಿಕ್ಕ ತಮ್ಮ! ಇನ್ನು ಈ ಜನ್ಮದಲ್ಲಿ ಅಕ್ಕನನ್ನು ಕಾಣಲಾರೆವೆಂದು ತಿಳಿದಿದ್ದ ತಮ್ಮನೂ ಕೀರ್ತಿಯನ್ನು ನೋಡಿ ಸಂತೋಷಾಶ್ಚರ್ಯದಿಂದ ಕಣ್ಣರಳಿಸಿ ನಿಂತುಬಿಟ್ಟ. ಅವನು ಒಳಬಂದಾಗ ಅವನ ಕಂಗಳಲ್ಲಿದ್ದ ನೀರನ್ನು, ಮುಖದಲ್ಲಿ ನೆಲಸಿದ್ದ ಭಯಮಿಶ್ರಿತ ಗಾಬರಿಯನ್ನೂ ಗಮನಿಸಿದ್ದ ರಾಜಿ ಅವನನ್ನ ಎಚ್ಚರಿಸಿ ದಳು. ಒಮ್ಮೆಲೆ ಅಕ್ಕನ ಕಾಲ್ಗಳನ್ನು ತಬ್ಬಿಹಿಡಿದು "ಅಕ್ಕಾ, ಭಾವ ಬಿದ್ದು ತಲೆಯೊಡ್ಕಂಡಿದಾನೆ...... ಅಪ್ಪನ್ಗೂ ಹುಷಾರಿಲ್ಲ. ಎಲ್ರೂ ಅತ್ಗಂಡು ಕುತ್ಕಂಡಿ ದಾರೆ..... ರಾಜಕ್ಕನ ಕರ್ಕೊಂಡೋಗನಂತ ಬಂದೆ. ನೀನು ಬಂದಿದ್ದಿಯಲ್ಲಾ ಬಾರಕ್ಕ...... ಪ್ಲೀಸ್ ಬಾರಕ್ಕಾ......" ಎಂದು "ನೀವಿಬ್ರೂ ಹೋಗಿರ್ರಿ..... ನಾನೀಗ್ಬಂದೆ..." ಅಂದೋನು ಬಂದಷ್ಟೇ ವೇಗವಾಗಿ ಹಿಂದಕ್ಕೋಡಿದ. ಅವರಿಬ್ರು

ಕೀರ್ತಿ ಮನೆ ತಲುಪೋಷ್ಟರಲ್ಲಿ ಮನೆಮುಂದೆ ಜನ ನೆರೆದಿದ್ರು. ಅಳು ದೂರಕ್ಕೆ ಕೇಳಿಸುತ್ತಿತ್ತು. ಇಬ್ಬರನ್ನು ನೋಡಿದ ಜನ ಗುಸುಗುಡುತ್ತಲೇ ದಾರಿಕೊಟ್ಟರು. ಗುಂಪಿನ ಮಧ್ಯದಲ್ಲಿ ರಕ್ತದಲ್ಲಿ ಅದ್ದಿ ತೆಗೆದಂತಿದ್ದ ಮಹೇಶ ಬಿದ್ದಿದ್ದ. ಬವಳಿಬಂದಂತಾದರೂ ಸಾವರಿಸಿಕೊಂಡಳು ಕೀರ್ತಿ. ಆಕೆಯನ್ನು ಕಂಡು ಮನೆಯವರೆಲ್ಲ ಅರೆಕ್ಷಣ ಬೆಚ್ಚಿದರೂ, ಮರುಕ್ಷಣ ಆಕೆಗೆ ಜೋತುಬಿದ್ದರು. ಅಪ್ಪ ತಗ್ಗಿಸಿದ್ದ ತಲೆಯನ್ನು ಮೇಲೆತ್ತಲಿಲ್ಲ. "ಹೇಗಾಯ್ತು? ಏಕಾಯ್ತು?" ಎಂದು ಕೇಳಲು ಸಮಯವಿರಲಿಲ್ಲ. ಮಹೇಶನನ್ನು ತುರ್ತಾಗಿ ಆಸ್ಪತ್ರೆಗೆ ಸಾಗಿಸಬೇಕಿತ್ತು.

ಅಷ್ಟರಲ್ಲಿ ತಮ್ಮ ಆಟೋದಲ್ಲಿ ಬಂದಿಳಿದ. ಎರಡು ದಿನಗಳಾದರೂ ಮಹೇಶನಿಗೆ ಜ್ಞಾನ ಬಂದಿರಲಿಲ್ಲ. ಡಾಕ್ಟ್ರು ಅವನ ಬಗ್ಗೆ ಯಾವ ಭರವಸೆಯನ್ನೂ ಕೊಟ್ಟಿರಲಿಲ್ಲ. ಈ ಅವಧಿಯಲ್ಲಿ ತಮ್ಮ ಅಂದಿನ ಅನಾಹುತದ ಬಗ್ಗೆ ತಿಳಿಸಿದ್ದ.

ಅಂದು ಬೆಳಗ್ಗಿನಿಂದಲೂ ಮಹೇಶ ಮನೆಗೆ ಬಂದಿರಲಿಲ್ಲ. ಸಂಜೆ ಬಂದಾಗಲೂ ಅವಸರದಲ್ಲಿದ್ದ. ಕಾಂಪೌಂಡಿನಲ್ಲಿ ಮನೆಯ ದುರಸ್ತಿಗಾಗಿ ಸೈಜುಕಲ್ಲುಗಳನ್ನು ಹೇರಿಸಿದ್ದರು. ಹಿಂದಿನ ದಿನ ಅತಿ ಮಳೆಯಿಂದಾಗಿ ಕಲ್ಲಿನ ರಾಶಿಯ ಪಕ್ಕದಲ್ಲಿ ತುಂಬಾ ಕೆಸರಿತ್ತು. ಗಡಿಬಿಡಿಯಲ್ಲಿದ್ದ ಮಹೇಶ ಅದನ್ನು ಗಮನಿಸದೆ, ಧಾವಂತದಲ್ಲಿ ಕೆಸರಿನಲ್ಲಿ ಕಾಲಿಟ್ಟಿದ್ದಷ್ಟೆ ಅವನ ತಲೆ ದೊಡ್ಡದೊಂದು ಕಲ್ಲಿಗೆ ಅಪ್ಪಳಿಸಿತ್ತು.

ಮೂರನೆಯ ದಿನದಂದು ಮೆಲ್ಲನೆ ಕಣ್ತೆರೆದ ಮಹೇಶ ಮಸುಕಾದರೂ ಮೊದಲು ಕಂಡದ್ದು ಕೀರ್ತಿಯ ಮುಖ. 'ಕೀರ್ತಿ.....!' ಅವನ ಕಣ್ಣುಗಳು ಮಿಂಚಿ ಅರಳಿದವು. ಅವನು ಎಚ್ಚರಾದ್ದನ್ನು ಗಮನಿಸಿದ ಕೀರ್ತಿ ಅವನ ತಲೆಯ ಹಿಂಬದಿಯಲ್ಲಿ ನಿಂತು ಅಳುತ್ತಿದ್ದ ಸ್ವರ್ಣಳನ್ನು ಕರೆದು ತಾನು ನಿಂತಿದ್ದ ಜಾಗದಲ್ಲಿ ನಿಲ್ಲಿಸಿ, ಮೆಲ್ಲನೆ ವಾರ್ಡಿನಿಂದ ಹೊರನಡೆದಳು. ತನ್ನ ಸೂಕ್ಷ್ಮಕಣ್ಣಿನಿಂದ ಎಲ್ಲವನ್ನೂ ಗಮನಿಸುತ್ತಿದ್ದ ರಾಜಿ ತಾನೂ ಕೀರ್ತಿಯನ್ನು ಹಿಂಬಾಲಿಸಿದಳು. ಇಬ್ಬರೂ ಸ್ವಲ್ಪದೂರ ನಡೆದು ಒಂದೆಡೆ ನಿಂತರು. ನಿಂತು ನಿಮಿಷವೂ ಆಗಲಿಲ್ಲ ವಾರ್ಡಿನೊಳಗಿಂದ ಸ್ವರ್ಣಳ ಚೀತ್ಕಾರ ಕೇಳಿಸಿ, ಬಂದ ದಾರಿಯಲ್ಲೇ, ಇಬ್ಬರೂ ದೌಡಾಯಿಸಿದರು. ರಾಜಿ ಓಡುತ್ತಾ ಬೆಡ್ ಸಮೀಪಿಸಿದರು ಕೀರ್ತಿ ಬಾಗಿಲಲ್ಲೆ ನಿಂತುಬಿಟ್ಟಳು. ಸ್ವರ್ಣ ಮಹೇಶನನ್ನು ತಬ್ಬಿ ಅಳುತ್ತಿದ್ದರೆ, ಅಪ್ಪ ಮಗಳ ದುರ್ಗತಿಯನ್ನ ಪ್ರಲಾಪಿಸುತ್ತ ತಾನೂ ಮಗಳೊಡನೆ ರೋಧಿಸುತ್ತಿದ್ದಾನೆ. ಬಾಗಿಲ ಬಳಿ ನಿಂತವಳನ್ನು ನೋಡಿ ಅಮ್ಮ ಧಾವಿಸಿ ಬಂದು "ನಮ್ನೆಲ್ಲ ಪರ್ದೇಸಿ ಮಾಡಿ ಹೋಗ್ಬಿಟ್ನಮ್ಮಾ ಮಹೇಶ...... ನನ್ ಮಗ್ನಿಗಿಂತ ಹೆಚ್ಚಾಗಿದ್ದ....... ವಳ್ಳೆ ಪ್ರಾಯ್ದಾಗೆ ಮಗಳ್ನ ರಂಡೆ ಮಾಡಿ ಹೋದ್ನಲ್ಲೆ....... ಅವ್ನಿಲ್ದಂಗೆ ಸ್ವರ್ಣ ಯಾಂಗೆ ಬದುಕ್ತಾಳೇ..... ನಾವ್ ಯಾರಿಗೇನ್ ಅನ್ಯಾಯ ಮಾಡಿದ್ವಿ ಅಂತ ದೇವ್ರು ಈ ಶಿಕ್ಷೆ ಕೊಟ್ನಮ್ಮಾ....." ಎನ್ನುತ್ತ ಅವಳನ್ನು ತಬ್ಬಿಹಿಡಿದಳು. ಆ ಕ್ಷಣದಲ್ಲಿಯೂ ಕೀರ್ತಿಯ ಮುಖದಲ್ಲಿ ವ್ಯಂಗ್ಯ ನಗೆಯೊಂದು ಸುಳಿದುಹೋಯ್ತು. ಒಂದೇ

ಒಂದು ಸಮಾಧಾನದ ಮಾತೂ ಆಡದೆ ತಾಯಿಯಿಂದ ಬಿಡಿಸಿಕೊಂಡು, ಹೆಣವನ್ನು ಮನೆಗೆ ಸಾಗಿಸುವ ಏರ್ಪಾಡು ಮಾಡಲು ಅತ್ತ ಹೊರಟಳಾಕೆ. ಮಹೇಶನನ್ನು ಹೊತ್ತ ಕಾರು ಮನೆಯ ದಾರಿ ಹಿಡಿಯುತ್ತಲೂ ರಾಜಿಯ ಮನೆಯತ್ತ ಹೊರಟಳು ಕೀರ್ತಿ. ಮನೆ ತಲುಪಿದವಳೇ ಹಾಸಿಗೆಯಲ್ಲಿ ಮೈಚಲ್ಲಿ, ಕಣ್ಮುಚ್ಚಿದಳು. ಅವಳ ಮೈಮನಗಳೆರಡೂ ಭಾರವಾಗಿದ್ದವು. ಕಣ್ಮುಚ್ಚಿ, ಹಾಸಿಗೆಯಲ್ಲಿ ಒರಗಿದವಳನ್ನು ವಿಸ್ಮಯದಿಂದ ನೋಡಿದಳು ರಾಜಿ. ಅನಾಹುತ ನಡೆದ ದಿನದಿಂದಲೂ ಅವಳನ್ನು ಗಮನಿಸುತ್ತಲೇ ಇದ್ದಳು. ಅವಳ ಮುಖದಲ್ಲಿ ಕಿಂಚಿತ್ತೂ ದುಃಖ ಛಾಯೆಯಿಲ್ಲ! ಕಣ್ಣಿಂದ ಹನಿನೀರೂ ಉದುರಿಲ್ಲ! ಕೇವಲ, ಕಷ್ಟದಲ್ಲಿರುವ ಬಂಧುಗಳಿಗೆ ಸಹಾಯ ಮಾಡುವ ಕರ್ತವ್ಯ ಎದ್ದು ಕಾಣುತ್ತಿತ್ತಷ್ಟೆ.

ಏಕೋ ಏನೋ ಈ ಬಾರಿ ಬೆಂಗ್ಳೂರಿಗೆ ಹೋಗಿದ್ದಾಗ ಕೀರ್ತಿಯನ್ನು ತನ್ನೊಡನೆ ಕರೆದೊಯ್ಯಲೇಬೇಕೆಂಬ ಹಟ ಬಂದುಬಿಟ್ಟಿತ್ತು. ಅವಳೊಡನೆ ಜಗಳವಾಡಿ, ಮಾತು ಬಿಟ್ಟು, ಊಟಬಿಟ್ಟು, ಅತ್ತುಕರ್ದ್ದು ಕೊನೆಗೂ ಅವಳನ್ನು ಒಪ್ಪಿಸಿ ಕರೆತಂದಿದ್ದಳು. ಆದರೆ ಇಲ್ಲಿಗೆ ಬಂದಾಗ ಮಹೇಶನನ್ನು ಕೊನೆಯ ಬಾರಿಗೆ ಅವಳು ನೋಡಲೆಂದೇ ಕರೆತಂದಂತಾಗಿತ್ತು. ನಿಟ್ಟುಸಿರಿಟ್ಟಳು ರಾಜಿ.

ಮಹೇಶನನ್ನು ದುರ್ಗದಲ್ಲಿಯೇ ಮಣ್ಣು ಮಾಡುವುದೆಂದು ನಿರ್ಧರಿಸಿದ ಮೇಲೆ ತಮ್ಮ ಅವರನ್ನು ಕರೆಯಲು ಬಂದ. "ನಾನು ಅಲ್ಲಿಗೆ ಲಾಯಕ್ಕಾದವಳಲ್ಲ ನೀನು ಹೋಗ್ಬಿಟ್ಟು ಬಾ...." ಎಂದು ಅವರೊಡನೆ ಹೋಗಲು ನಿರಾಕರಿಸಿದಳು ಕೀರ್ತಿ. ರಾಜಿ ಬಿಡಲಿಲ್ಲ. ಅವಳನ್ನು ಒಪ್ಪಿಸಿ, ಕರೆದುಕೊಂಡು ಹೋಗುವಷ್ಟರಲ್ಲಿ ಮಹೇಶನ ಹೆಣವನ್ನು ಸಿಂಗರಿಸಿ, ಪಕ್ಕದಲ್ಲಿ ಹಣೆ ತುಂಬಾ ಕುಂಕುಮ ಬಳಿದು, ಹೂ ಮುಡಿಸಿ ಸ್ವರ್ಣಳನ್ನೂ ಕೂರಿಸಿದ್ದರು. ಕೀರ್ತಿಯನ್ನು ನೋಡಿದ್ದೆ ಅಮ್ಮನೂ ಸೇರಿದಂತೆ ಒಂದು ಗುಂಪು ಅವಳನ್ನು ಸಮೀಪಿಸಿತು. ಅಮ್ಮ ಪಕ್ಕಕ್ಕೆ ಸರಿದಳು. "ಬೇಗ ಬಾರಮ್ಮ ಕೀರ್ತಿ..... ಆ ದೇವ್ರೇ ಕಡೇ ಗಳಿಗೆಯಲ್ಲಿ ನಿಂಗೆ ಈ ಕಡೆದಾರಿ ತೋರ್ಸಿದಾನೆ. ಬೇಗ್ಬಾ ಇನ್ನು ಮಾಡೋ ಶಾಸ್ತ್ರ ಬಹಳ ಐತೆ....." ಎಂದಿತು ಗುಂಪು. ಕೀರ್ತಿ ತನ್ನ ಮೊನಚು ದೃಷ್ಟಿಯನ್ನ ಅಮ್ಮನತ್ತ ಹರಿಸಿದಳು. "ನಿಮ್ಮ ಶಾಸ್ತ್ರಗಳ್ನೆಲ್ಲ ನನ್ನತ್ರ ಹೇಳ್ಬೇಡಿ. ನನ್ನ ತಂಟೆಗೆ ನೀವು ಬರ್ದೆ ಇದ್ರೇನೇ ಕ್ಷೇಮ...." ಮಾತು ಹರಿತವಾಗಿದ್ದವು. ಅದಕ್ಕೇನು ಹೇಳಲು ತೋಚದೆ ತೊದಲುತ್ತ, ತಡವರಿಸುತ್ತ ಸರಿದುಹೋಯಿತು ಗುಂಪು. ಅಪರೂಪದ ವಸ್ತುವನ್ನು ನೋಡುವಂತೆ ಅವಳನ್ನೆ ನೋಡಿದರು ಅಲ್ಲಿ ನೆರೆದಿದ್ದ ಜನ.

ಹೆಣದ ಪಕ್ಕದಲ್ಲಿ ಸ್ವರ್ಣಳನ್ನು ಕೂರಿಸಿ ಅವರು ಮಾಡುತ್ತಿದ್ದ ಶಾಸ್ತ್ರಗಳನ್ನು ನೋಡಿ ದಿಗ್ಭ್ರಾಂತಳಾದಳು ರಾಜಿ. ಇದೀಗ ತಾನೆ ಗಂಡನನ್ನು ಕಳೆದುಕೊಂಡು ಆಘಾತದಿಂದ, ನೋವಿನಿಂದ ಜರ್ಝರಿತಳಾಗಿ, ಕರುಳು ಕಿತ್ತುಬರುವಂತೆ ರೋಧಿಸುತ್ತಿದ್ದವಳನ್ನು ಮತ್ತೊಮ್ಮೆ ಮದುಮಗಳಂತೆ ಸಿಂಗರಿಸಿ, ಹೆಣದೊಂದಿಗೆ

ಮದುವೆ ಮಾಡುವಂಥ ಕ್ರೂರ ಪದ್ಧತಿಯಿಂದ ಅವಳನ್ನು ಇನ್ನಷ್ಟು ಹಿಂಸಿಸುತ್ತಿರುವ ಅವರ ಬಗ್ಗೆ ಹೇಸಿಗೆಯೆನಿಸಿತು. ಒಬ್ಬಾಕೆ ಆಕೆಯ ಉಡಿತುಂಬಲು ಹೆಣಗಾಡಿದರೆ, ಇನ್ನೊಬ್ಬಾಕೆ ಆಕೆಗೆ ಆರತಿ ಮಾಡುವ ಸಡಗರದಲ್ಲಿದ್ದಾಳೆ! ಎಲ್ಲವನ್ನೂ ನೋಡುತ್ತಿದ್ದವಳ ಚಿತ್ರದಲ್ಲಿ ಏಳು ವರ್ಷಗಳ ಹಿಂದಿನ ಘಟನೆಗಳು ಧುತ್ತೆಂದು ಎದುರಾದವು.

ಕೀರ್ತಿಯ ಜೀವನದ ಅಮೃತಘಳಿಗೆಯದು! ಮದುಮಗಳಾಗಿ ಶೋಭಿಸುತ್ತಿದ್ದ ಕೀರ್ತಿಯನ್ನು ಎಲ್ಲರೂ ರೇಗಿಸಿದ್ದೇ ರೇಗಿಸಿದ್ದು. ಮಂಗಳವಾದ್ಯಗಳ ಮೊಳಗುವಿಕೆಯೊಡನೆ ಕೀರ್ತಿಯ ಕುತ್ತಿಗೆಗೆ ತಾಳಿ ಬಿದ್ದಾಗ ರಾಜಿಯ ಕಣ್ಣುಗಳು ಆನಂದಬಾಷ್ಪ ಸುರಿಸಿದ್ದವು.

ನಾಲ್ಕು ಹೆಣ್ಣು, ಎರಡು ಗಂಡು ಮಕ್ಕಳಲ್ಲಿ ಹಿರಿಯುವಳೇ ಕೀರ್ತಿ. ಡಿಗ್ರಿ ಮುಗಿಸಿ, ಬಿ.ಎಡ್ ಮುಗಿಸಿದ್ದರೂ ಇತ್ತ ನೌಕರಿಯೂ ಸಿಕ್ಕಿರಲಿಲ್ಲ. ಅತ್ತ ಕಂಕಣವೂ ಕೂಡಿ ಬಂದಿರಲಿಲ್ಲ.. ಆಕೆಯ ಹಿಂದೆಯೇ ತುಂಬ ಚೆಲುವೆ ಆದ ಸ್ವರ್ಣಳೂ ಸಿದ್ಧಳಿದ್ದಳು. ಆದರೆ ಅಪ್ಪನೋ ವಿಪರೀತ ಬೇಜವಾಬ್ದಾರಿಯ ಮನುಷ್ಯ. ಜೊತೆಗೆ ಜಿಪುಣತನವೂ ಅಂಟಿಕೊಂಡಿತ್ತು. ಆದ್ದರಿಂದ ವರಾನ್ವೇಷಣೆಯ ಬಗ್ಗೆ ತಲೆಕೆಡಿಸಿಕೊಂಡವನೇ ಅಲ್ಲ. ತಾಲ್ಲೂಕು ಕಚೇರಿಯಲ್ಲಿ ಗುಮಾಸ್ತನಾಗಿ ಸಂಬಳದ ಜೊತೆಗೆ ಗಿಂಬಳವನ್ನೂ ಧಾರಾಳವಾಗಿ ಗಿಟ್ಟಿಸುತ್ತ ಹಣವನ್ನೇನೋ ಕೂಡಿಟ್ಟಿದ್ದ; ಆದರೆ ಖರ್ಚು ಮಾಡುವುದೆಂದರೆ ಕುತ್ತಿಗೆಗೆ ಬರುತ್ತಿತ್ತು. ಇನ್ನು ಅವರಿವರು ಕರೆದುಕೊಂಡು ಬಂದ ವರಗಳು ತಾಳಿಕಟ್ಟಲು ಬಾಯಿಗೆ ಬಂದಷ್ಟು ಕೂಲಿ ಕೇಳುತ್ತ ಅಪ್ಪನ ಎದೆಬಡಿತ ಹೆಚ್ಚಿಸಿ ಹೋಗಿದ್ದರಷ್ಟೆ. ಕೀರ್ತಿಗೆ ಇಂದಲ್ಲ, ನಾಳೆ ಕೆಲಸ ಸಿಗುವುದು ಖಂಡಿತ ಎಂದು ಗೊತ್ತಿದ್ದ ಅಪ್ಪನಿಗೆ, ಎಂಟಕ್ಕೆ ಓದಿಗೆ ತಿಲಾಂಜಲಿಯಿತ್ತು ಅಡುಗೆಮನೆಗೆ ಖಾಯಂ ಆಗಿದ್ದ ಸ್ವರ್ಣಳನ್ನು ಬೇಗ ಸಾಗಿಸುವ ಯೋಚನೆ. ಮನೆಯಲ್ಲಿದ್ದೂ ಕೂಳುದಂಡ ಅವಳಿಗೆ! ಕೀರ್ತಿಗೆ ಅಪ್ಪನ ಈ ಕಂತ್ರಿ ಬುದ್ಧಿಯ ಬಗ್ಗೆ ಬಲು ಬೇಸರ. "ದೇವ್ರೇ.......... ಇಂತಹ ಅನಿಷ್ಟ ಅಪ್ಪನನ್ನು ಎಲ್ಲಿಂದ ತಗುಲಿಹಾಕಿದೆ ನಮಗೆ.........." ಎಂದುಕೊಳ್ಳುತ್ತಿದ್ದಳು.

ಅಪ್ಪನ ದುರಾಸೆಗೆ ಕಲ್ಲುಬಿದ್ದಿದ್ದು ಕೀರ್ತಿಯೆನ್ನು ಮೆಚ್ಚಿದ್ದೂ ಅಲ್ಲದೆ, ವರದಕ್ಷಿಣೆಯನ್ನೂ ತಿರಸ್ಕರಿಸಿದ ಮಹೇಶನ ಪ್ರವೇಶದಿಂದಾಗಿ, ಅಪ್ಪನ ಸ್ನೇಹಿತರೊಬ್ಬರ ಕಳಕಳಿಯ ಮನವಿಗೆ ದೊಡ್ಡ ಮನಸ್ಸಿನಿಂದ ಒಪ್ಪಿಗೆ ಸೂಚಿಸಿದ್ದ ಮಹೇಶ ಮುಂದಿನ ಒಂದೇ ತಿಂಗಳಲ್ಲಿ ಆಕೆಗೆ ತಾಳಿಯನ್ನೂ ಕಟ್ಟಿಬಿಟ್ಟ. ಮದುವೆಯಾದ ಆರ್ತಿಂಗಳಿಗೆ ಕೀರ್ತಿಗೆ ಟೀಚರ್ ಕೆಲಸವೂ ಸಿಕ್ಕಿತು.

"ಏನಮ್ಮ ಕೀರ್ತಿನ ಸ್ಮಶಾನಕ್ಕೆ ಕರ್ಕಂಡ್ಬರೋ ಜವಾಬ್ದಾರಿ ನಿಂದೇ......" ಎನ್ನುತ್ತ ಮಹೇಶನ ಅಮ್ಮ ರಾಜಿಯನ್ನು ಹಿಡಿದು ಅಲುಗಿಸಿದಾಗಲೇ ಅವಳಿಗೆ ಎಚ್ಚರ. ಆಗಲೇ ಹೆಣ ಎತ್ತುವುದರಲ್ಲಿದ್ದರು. ಕೆಲವು ಹೆಂಗಸರು ಸ್ವರ್ಣಳ

ಕುಂಕುಮವನ್ನು ಅಳಿಸಲು ತಿಣುಕಾಡುತ್ತಿದ್ದರು. ಇನ್ನು ಸ್ಮಶಾನದಲ್ಲಿ ಆಕೆಯ ಬಳೆಗಳನ್ನು ಒಡೆಯುವ ಇನ್ನೊಂದು ಶಾಸ್ತ್ರವಿತ್ತು.

ಒಂಟಿಯಾಗಿ ಜನರಿಂದ ಸ್ವಲ್ಪ ದೂರದಲ್ಲಿ ನಿಂತಿದ್ದ ಕೀರ್ತಿಯನ್ನ ಸಮೀಪಿಸಿ "ಬಾ ಕೀರ್ತಿ, ನಾವು ಹೋಗಿ ಎರಡಿಡಿ ಮಣ್ಣಾಕಿ ಬರೋಣ. ಮತ್ತೆ ಬೇಕಂದ್ರೂ ಮಹೇಶ ಸಿಗೋಲ್ಲ. ನೀನೀಗ ಅಲ್ಲಿಗೆ ಬರದಿದ್ರೆ ಈ ಜನ ಸುಮ್ನೆ ಬಾಯಿಗೆ ಬಂದಂಗ ಮಾತಾಡ್ತಾರೆ......." ಎಂದಳು ರಾಜಿ. ಕೀರ್ತಿ ರಾಜಿಯನ್ನ ಬೆರಗಿನಿಂದ ನೋಡಿದಳು. "ರಾಜಿ ನಿಂಗೆ ಬಹುಶಃ ಮರೆತೋಗಿರ್ಬಹುದ್ದು ಆದ್ರೆ ನಂಗೆ ಚೆನ್ನಾಗಿ ಜ್ಞಾಪ್ಕ ಇದೆ. ಮಹೇಶ ಮತ್ತೆ ಸಿಗದಹಾಗೆ ಕಳೆದೋಗಿ ಆಗ್ಲೇ ನಾಲ್ಕು ವರ್ಷಗಳಾದ್ವು. ಜೀವನದಲ್ಲಿ ಸಾವು ಸಂಭವಿಸೋದು ಒಮ್ಮೆ ತಾನೆ ? ಈ ದರಿದ್ರ ಜನರಿಗೋಸ್ಕರ ನಾನಲ್ಲಿಗ್ಬಂದು ಇಲ್ದಿರೋ ದುಃಖ ಬರಿಸ್ಕೊಂಡು, ಬರ್ದಿರೋ ಕಣ್ಣೀರನ್ನ ಉದುರಿಸೋಂತ ನಾಟ್ಕ ಮಾಡಿ, ಆತ್ಮವಂಚನೆ ಮಾಡ್ಕೊಳ್ಳೋಕೆ ಸಿದ್ಧಳಿಲ್ಲ. ಈ ವಿಷಯದಲ್ಲಿ ಮಾತ್ರ ನನ್ನ ಬಲವಂತಪಡಿಸ್ಬೇಡ ಪ್ಲೀಸ್......" ಅಂದ್ಳು.

ಈ ಮಾತುಗಳನ್ನು ಅಲ್ಲಿಯೇ ನಿಂತು ಕೇಳಿಸಿಕೊಳ್ಳುತ್ತಿದ್ದ ಮಹೇಶನ ತಂಗಿ ಕೋಪದಿಂದ ಬುಸುಗುಟ್ಟಿದಳು. "ನಿನ್ ಕರ್ಮಕ್ಕೆ ಇನ್ನೊಬ್ರನ್ನ ಯಾಕೆ ಅನ್ತಿಯಾ.....? ನೀನ್ ನೆಟ್ಟಗಿದ್ದಿದ್ರೆ ನಿನ್ ಗಂಡ ಯಾಕೆ ಇನ್ನೊಬ್ಳತ್ರಕ್ಕೆ ಹೋಗ್ತಿದ್ದ......? ಗಂಡನ ಹೆಣಾನ ಪಕ್ಕದಲ್ಲಿಟ್ಕಂಡು ಒಳ್ಳೆ ಬೀದಿ ಸೂಳೆ ತರಹ ಓಡಾಡ್ತಿರೋ ನಿನ್ನಂಥ ಮೂರುಬಿಟ್ಟೋಳಿಗೆ ಗಂಡನಾದ್ರು ಯಾಕೆ ಬೇಕು.....? ಕಟ್ಕಂಡು ಮೂರ್ವರ್ಷ ಆದ್ರೂ ನಿನ್ ಹೊಟ್ಟೆ ಉಬ್ಬಿಲ್ಲಾಂದ್ರೆ ಅವ್ನೇನ್ ಮಾಡ್ತಾನೆ......?" ಅವ್ಳ ಮಾತು ಇನ್ನೂ ಮುಂದುವರಿಯೋ ಮುನ್ನವೇ ಬಾಣದಂತೆ ನುಗ್ಗಿದ ಕೀರ್ತಿ ಆಕೆಯ ಕೆನ್ನೆಗೊಂದು ಬಾರಿಸಿದಳು. ಹೊಡೆತದ ರಭಸಕ್ಕೆ ಉರುಳಿಬಿದ್ದಳಾಕೆ. ಕೋಪದಿಂದ ನಡುಗುತ್ತಿದ್ದ ಕೀರ್ತಿಯನ್ನ ಎಳೆದು ಕೊಂಡು ಹೋಗಿ ಆಟೋವೊಂದನ್ನು ಹತ್ತಿದಳು ರಾಜಿ.

ಕೀರ್ತಿಗೂ ಕೆಲಸ ಸಿಕ್ಕನಂತರ, ಬದುಕು ಸುಂದರವಾಗಿತ್ತು. ವಾರಕ್ಕೆರಡ್ಮೂರು ಸಲ ಅವರನ್ನ ಮನೆಗೆ ಊಟಕ್ಕೆ ಕರೆದೊಯ್ಯುತ್ತ ತನ್ನ ನೂರಾರು ತಾಪತ್ರಯಗಳ ತರಲೆ ಮಾಡುತ್ತ ಹಣ ಕೇಳತೊಡಗಿದ್ದ ಅಪ್ಪ; ಗಂಡನೆದುರು ಅಪ್ಪನನ್ನು ಕೀಳುಮಾಡಲಾರದೆ ಅವನು ಕೇಳಿದಾಗಲೆಲ್ಲಾ ತೆಪ್ಪಗೆ ದುಡ್ಡು ಕೊಡುತ್ತಿದ್ದಳು ಕೀರ್ತಿ. ಎರಡು ವರ್ಷಗಳು ಹಾರುತ್ತ ಹೋದವು. ತಾಯಿಯಾಗುವ ಅವಳ ಹಂಬಲವನ್ನು "ಇನ್ನೊಂದ್ವರ್ಷ ಆರಾಮಾಗಿದ್ದು ಆಮೇಲೆ ಖಂಡಿತ ಅಪ್ಪ, ಅಮ್ಮ ಆಗೋಣ......" ಎಂದು ತಮಾಷೆ ಮಾಡುತ್ತ ಮಹೇಶ ತನ್ನ ಮನದಾಸೆ ತಿಳಿಸಿದಾಗ ಗಂಡನನ್ನ ಬಲುಪ್ರೀತಿಯಿಂದ, ಗೌರವದಿಂದ ಕಾಣುತ್ತಿದ್ದ ಕೀರ್ತಿ ಅವನ ಮಾತು ಮೀರಲಾರದೆ, ಅವನ ಮನ ನೋಯಿಸಲಿಚ್ಛಿಸದೆ ತನ್ನ

ಹಂಬಲವನ್ನ ಹಾಗೆ ಅಡಗಿಸಿಕೊಂಡಳು. ಮೂರನೇ ವರ್ಷಕ್ಕೇ ಅವಳಿಗೆ ಗದುಗಿಗೆ ವರ್ಗವಾದಾಗ ನಿಜಕ್ಕೂ ಕಂಗಾಲಾದಳು. ಮಹೇಶನೇ ಅವಳಿಗೆ ಧೈರ್ಯ ಹೇಳಿ "ವಾರಕ್ಕೊಮ್ಮೆ ಬಂದುಹೋಗುವುದಾಗಿಯೂ, ವರ್ಗ ರದ್ದುಪಡಿಸಲು ಪ್ರಯತ್ನಿಸುವುದಾಗಿಯೂ" ಭರವಸೆ ನೀಡಿ ಅವಳನ್ನ ಗದುಗಿಗೆ ಬಿಟ್ಟುಬಂದ. ಕೊಟ್ಟ ಮಾತಿನಂತೆ ವಾರಕ್ಕೊಮ್ಮೆಯೋ ಹದಿನೈದು ದಿನಕ್ಕೊಮ್ಮೆಯೊ ಹೋಗಿ ಬರುತ್ತಿದ್ದ. ಹಾಗಾಗಿ ಕೀರ್ತಿ ದುರ್ಗದ ಕಡೆಗೆ ತಲೆ ಹಾಕಲಿಲ್ಲ. ಆದರೆ ವರ್ಷದ ಕೊನೆಯಲ್ಲಿ ರಾಜಿಯಿಂದ ಬಂದ ಪತ್ರ ಅವಳ ನೆಮ್ಮದಿಯನ್ನು ಕಲಕಿ, ಅವಳನ್ನು ಅಶಾಂತತೆಯ ಮಡುವಿನಲ್ಲಿ ಕೆಡವಿತು. ಸ್ವರ್ಣ, ಮಹೇಶರ ಬಗ್ಗೆ ಅನೇಕ ಕಥೆಗಳು ಹುಟ್ಟುತ್ತಿದೆಯೆಂದೂ ಆಕೆಯೊಮ್ಮೆ ದುರ್ಗಕ್ಕೆ ಬಂದರೆ ಒಳ್ಳೆಯದೆಂದೂ ಬರೆದಿದ್ದಳು.

ಸುಳಿವು ಕೊಡದೆ ಬಂದಿಳಿದ ಕೀರ್ತಿ ಎಲ್ಲರನ್ನೂ ಗಾಬರಿಗೊಳಿಸಿದ್ದಳು. ಕೀರ್ತಿ ಗದುಗಿಗೆ ಹೋದನಂತರ ಒಂಟಿಯಾಗಿದ್ದ ಅಳಿಯನಿಗೆ ಮಾವನ ಮನೆಯ ಉಪಚಾರ ಜೋರಾಗಿತ್ತು. ಮಹೇಶನ ಹೊಟ್ಟೆ ತಣಿಸುವ ನೆಪದಲ್ಲಿ ಅವನ ಹಿಂದೆಮುಂದೆ ಓಡಾಡುತ್ತ ಕಣ್ಮನಗಳನ್ನು ತಣಿಸುತ್ತಿದ್ದಳು ಸ್ವರ್ಣ. ಅರಿತೂ ಅರಿಯದಂತಿದ್ದ ಅಪ್ಪ, ಅಮ್ಮ ಪರೋಕ್ಷವಾಗಿ ಅವರಿಗೆ ಪ್ರೋತ್ಸಾಹಿಸಿದರು. ಅಪ್ಪನ ಜಿಪುಣತನ, ಲೆಕ್ಕಾಚಾರದ ಬುದ್ಧಿ ಗರಿಬಿಚ್ಚಿತ್ತು. ಒಂದು ಮದುವೆಯ ಖರ್ಚು ಉಳಿಸುವ ದುರಾಸೆಯ ಸಡಗರದಲ್ಲಿ ಕೀರ್ತಿಯ ಬಾಳಿಗೆ ತಾನೇ ಮುಳ್ಳಾದ. ಕೀರ್ತಿ ವಿಷ್ಯ ತಿಳಿಯುವಷ್ಟರಲ್ಲಿ ಕಾಲಮಿಂಚಿಹೋಗಿತ್ತು. ಕಪಟವರಿಯದ ಆಕೆ ಕನಸಿನಲ್ಲಿಯೂ ಗಂಡನನ್ನು ಸಂಶಯಿಸಿದವಳಲ್ಲ. ಮಹೇಶನಿಗಾದರೂ ಕೀರ್ತಿಯ ಮೇಲಿನ ಪ್ರೀತಿ ಕಮ್ಮಿಯಾಗಿರಲಿಲ್ಲ. ಆದರೆ ಸ್ವರ್ಣಳ ಹಿಡಿತಕ್ಕೆ ಸಿಕ್ಕಿಬಿಟ್ಟಿದ್ದ. ಕಾಮಾತುರದಲ್ಲಿ ಎಚ್ಚರತಪ್ಪಿ, ಎಡವಿದ ಕಾರಣ ಆಕೆಗೆ ಸುಸ್ತು, ವಾಂತಿ ಬರಿಸಿದ ಅವನು ಸಂಪೂರ್ಣ ಅವಳ ವಶನಾದ. ತಾಯಿಯಾಗುವ ಅವಳ ಹಂಬಲವನ್ನು ನಯವಾಗಿ ಚಿವುಟಿ ಹಾಕಿದ್ದ ಅದೇ ಮಹೇಶನ ಕುಡಿ ಸ್ವರ್ಣಳ ಗರ್ಭವನ್ನ ಅಲಂಕರಿಸಿತ್ತು. ಮಹೇಶ ಕೀರ್ತಿಗೆ ದ್ರೋಹವೆಸಗಿದ್ದ!

ತನ್ನ ಸುಂದರ ಬದುಕನ್ನು ಸಮಾಧಿ ಮಾಡಿ, ಅದರ ಮೇಲೆ ತಮ್ಮ ಸುಖದ ಮಹಲನ್ನು ನಿರ್ಮಿಸಿಕೊಂಡ ಗಂಡ, ತಂಗಿ, ಅಪ್ಪ ಅಮ್ಮನ ಮೇಲೆ ತಿರಸ್ಕಾರ ಉಕ್ಕಿ ಹರಿಯಿತು ಕೀರ್ತಿಯಲ್ಲಿ. ಅಮ್ಮ ಮೆಲ್ಲನೆ ಮಾತು ತೆಗೆದಳು "ಸ್ವರ್ಣನ ವಿಷ್ಯ ಏನ್ಮಾಡೋಣ........?" ಎಂದು. "ಮದ್ವೇನೇ ಇಲ್ದೆ ಪ್ರಸ್ಥ ಮಾಡಿದ್ದೀರಿ, ಇನ್ನು ಹೆರಿಗೆ ಮಾಡ್ಸಿ ಬಾಣಂತನ ಮಾಡ್ರಿ ಅಷ್ಟೆ....." ವ್ಯಂಗ್ಯದಿಂದ ಇರಿದಳು ಕೀರ್ತಿ ಅವರನ್ನ. ಅಮ್ಮ ಅಷ್ಟಕ್ಕೇ ತೆಪ್ಪಗಾದಾಗ ಅಪ್ಪ ಬಾಯ್ಬಿಟ್ಟ. "ನಿನ್ ಮನಸ್ಗೆಷ್ಟು ನೋವಾಗಿದೆ ಅಂತ ನಂಗೊತ್ತಮ್ಮ ಆದ್ರೇನ್ಮಾಡೋದು.......? ಎಲ್ಲಾ ಋಣಾನುಬಂಧ. ಈಗಾಗ್ಲೆ ನಿನ್ತಂಗಿಗೆ ಮೂರ್ತಿಂಗ್ಳು. ಈ ಸ್ಥಿತೀಲಿ ಅವಳ್ನ ಕೈಬಿಟ್ರೆ ನಿನ್ನ ಆ ದೇವ್ರೂ ಮೆಚ್ಚಲ್ಲ. ಈಗಾಗ್ಲೆ ಜನ ಬಾಯಿಗ್ಬಂದಂಗೆ ಮಾತಾಡ್ತಿ

ದಾರೆ. ನಿಂಗೆ ಮಕ್ಕು ಆಗಿಲ್ಲಾಂತ ನೀನೇ ಸ್ವರ್ಣನ್ನ ಅಪ್ಪಿಗೊಪ್ಪಿದ್ವಿ ಅಂತ ಏನೇನೋ ಮಾತಾಡ್ತರೆ. ಇನ್ನೂ ಮದ್ವೆಯಾಗೋ ಇಬ್ರು ಹೆಣ್ಮಕ್ಳಿದಾರೆ......" ಅವನ ನಯವಂಚಕತನಕ್ಕೆ ಕೀರ್ತಿಯ ರಕ್ತ ಕೊತಕೊತ ಕುದಿಯಿತು. "ನಿನ್ ಮಗಳ್ನ ಕಳ್ಳತನದಲ್ಲಿ ಬಸುರಿ ಮಾಡಿಸಿದಲ್ದೆ ಅದಕ್ಕೊಳ್ಳೆ ಕಾರಣನೂ ಹುಡುಕ್ಬಿಟ್ಯಾ ಅಗ್ಲೆ......? ಎಂತಹ ಮಾಸ್ಟರ್ ಪ್ಲಾನಪ್ಪ ನಿಂದೂ.......? ಇನ್ನು ಇಬ್ರು ಹೆಣ್ಮಕ್ಳಿಗೆ ಗಂಡ್ಯಾಕ್ಕೋಡ್ತಿ......? ಹೇಗಿದ್ರೂ ಅಳಿಯ ಮನೇಲೇ ಇದಾನೆ ಅಪ್ರಿಗೂ ನೀನೇ ಮೀಡಿಯೇಟರ್ ಆಗ್ಬಿಡು. ದುಡ್ಡು ಉಳಿಯುತ್ತೆ....... ಮಕ್ಕು ಮದ್ವೇನೂ ಆಗುತ್ತೆ......" ಕೀರ್ತಿ ನುಡಿದಾಗ ಅಪ್ಪ ಅಬ್ಬರಿಸಿದ. "ಥೂ ಬೇವರ್ಸಿ ನೀನು ನನ್ಮಗ್ಳೇ ಅಲ್ಲ......" "ನಿನ್ನಂತ ತಲೆಹಿಡುಕನಿಗೆ ಮಗ್ಳು ಆಗ್ದೆ ಇರೋದ್ಕಿಂತ ಹೆಚ್ಚಿನ ಭಾಗ್ಯ ಇನ್ನ್ಯಾವ್ದಿದೆ ಹೇಳು....." ಮಾತಿನಿಂದಲೇ ಇರಿದಳು ಕೀರ್ತಿ. ಈಗ ಅಮ್ಮನ ಪಿತ್ತ ನೆತ್ತಿಗೇರಿತ್ತು. "ನೆಟ್ಟಗೆ ಮಾತಾಡೆ ಲೌಡಿ. ಅಪ್ಪ ಅನ್ನೋ ಮರ್ಯಾದೇನೆ ಇಲ್ವಲ್ಲೆ ನಿಂಗೆ? ಅವರಾಗೋ ಹೊತ್ಗೆ ಸುಮ್ಮಿದಾರೆ...... ಬೇರೆ ಯಾರಾದ್ರೂ ಆಗಿದ್ರೆ ನಿನ್ನ ಹುಟ್ಲಿಲ್ಲಾ ಅನ್ನಿಸ್ತಿದ್ರು......?" ಎನ್ನುತ್ತ ಮಗಳ ಮೇಲೆ ಕೈಯೆತ್ತಿಕೊಂಡು ಹೋಗಿದ್ದಳು. ಆಕೆಯನ್ನು ತಡೆದು ನಿಲ್ಲಿಸಿ "ನೀನು ತಪ್ಪು ತಿಳ್ಕೊಂಡಿದ್ದೀಯ. ಅಪ್ಪ ಅಮ್ಮ ಅನ್ನೊ ಮರ್ಯಾದೆ ಇನ್ನೂ ಸ್ವಲ್ಪ ಇರೋದ್ರಿಂದ್ಲೇ ನಾನೂ ಸುಮ್ನೆ ಇದ್ದೀನಿ. ಇಲ್ಲಂದಿದ್ರೆ ನೀವು ಮಾಡಿರೋ ಹಲ್ಕ ಕೆಲ್ಸಕ್ಕೇ ಬೇರೆ ಯಾರಾದ್ರೂ ಆಗಿದ್ದಲ್ಲಿ ಕೆರದಲ್ಲಿ ಹೊಡೀತಿದ್ರು......" ಎಂದು ಹೇಳಿ ಅಂದೇ ಮನೆಬಿಟ್ಟಿದ್ದಳು ಕೀರ್ತಿ. ಅವಳಲ್ಲಿ ಇರುವವರೆಗೆ ಮಹೇಶ ಇವಳ ಕಣ್ಣಿಗೆ ಬಿದ್ದಿರಲಿಲ್ಲ. ಅವನಂತಹ ನರಸತ್ತವನೊಂದಿಗೆ ಬದುಕೋದ್ಕಿಂತ ಸಾವೇ ಲೇಸು ಎಂದು ಅಂದೇ ದುರ್ಗ ಬಿಟ್ಟವಳು ಪುನಃ ಈಗಲೇ ಮಹೇಶ ಸಾಯುವ ಘಳಿಗೆಯಲ್ಲಿ ಇಲ್ಲಿಗೆ ಕಾಲಿಟ್ಟಿದ್ದು, ಮಹೇಶನನ್ನು ನೋಡಿದ್ದು, ಆದರೆ ಅಷ್ಟೊತ್ತಿಗೆ ಅವಳು ಸಂಪೂರ್ಣ ಬದಲಾಗಿದ್ದಳು.

ಅಂದು ಕೀರ್ತಿ ವಾಪಸ್ಸು ಬೆಂಗ್ಳೂರಿಗೆ ಹೊರಟಿದ್ದಳು. ಗೆಳತಿಯರಿಬ್ಬರು ಹರಟುತ್ತ ಬಸ್‌ಸ್ಟ್ಯಾಂಡಿನತ್ತ ಹೊರಟಿದ್ದರು. ವಿಪರೀತ ಜ್ವರದಿಂದ ನರಳುತ್ತಿದ್ದ ಮಗನನ್ನು ಆಸ್ಪತ್ರೆಗೆ ಕರೆತಂದಿದ್ದಳು ಸ್ವರ್ಣ. ಆಕಸ್ಮಾತ್ ಕೀರ್ತಿಯನ್ನು ಆಸ್ಪತ್ರೆಯ ಎದುರಿಗೆ ಕಂಡಳು. ಅವಳ ಮುಡಿಯಲ್ಲಿದ್ದ ಹೂ, ಕೈಯಲ್ಲಿದ್ದ ಬಳೆ, ಹಣೆಯಲ್ಲಿದ್ದ ಕುಂಕುಮ ಇವಳನ್ನು ಅಣಕಿಸಿದಂತಾಯ್ತು. ಮುಂಚೆಗಿಂತಲೂ ಆರೋಗ್ಯವಾಗಿ, ಸುಂದರವಾಗಿ ಕಾಣುತ್ತಿದ್ದಳು ಕೀರ್ತಿ. ತಾನಾದರೂ ಬಡಕಲು ನಾಯಿಯಂತೆ ಆಗಿದ್ದಳು. ಮದುವೆಗೆ ಮುನ್ನ ಮಹೇಶನೊಡನೆ ಕಳೆದಿದ್ದ ಸುಂದರ ಕ್ಷಣಗಳೇ ಆಕೆಯ ಜೀವನದ ಸುಂದರ ಕ್ಷಣಗಳು. ಆನಂತರ ಮಹೇಶ ಪೂರ್ಣ ಬದಲಾಗಿದ್ದ. ಅವನ ಹೃದಯದಲ್ಲಿ ಇನ್ನೂ ನೆಲಸಿದ್ದ ಕೀರ್ತಿ ಅವನ ನೆಮ್ಮದಿಯನ್ನು ಸಂಪೂರ್ಣವಾಗಿ ಕಿತ್ತುಕೊಂಡಿದ್ದಳು. ಪುನಃ ಅವಳ ಬಳಿಗೆ ಹೋಗುವ ಧೈರ್ಯ ಸಾಲದೆ ಇತ್ತ ಸ್ವರ್ಣಳೊಡನೆಯೂ ನೆಮ್ಮದಿಯಿಂದ ಇರಲಾಗದೆ

ಮಾನಸಿಕ ಹಿಂಸೆಯಿಂದ ಸಂಕಟಪಡುತ್ತಿದ್ದ. ಹೀಗಾಗಿ ಸ್ವರ್ಣ ಸುಖಜೀವನದಿಂದ ಪೂರ್ತಿ ವಂಚಿತಳಾಗಿದ್ದಳು. ಅವಳಿಗೆ ಈಗೀಗ ಅನ್ನಿಸುತ್ತಿತ್ತು.

ನಾನಂದು ಕೀರ್ತಿಯ ಬಾಳಿನಲ್ಲಿ ಪ್ರವೇಶಿಸದೆ ಇದಿದ್ದರೆ....... ? ಇಂದು ನನ್ನ ಸ್ಥಾನದಲ್ಲಿ ಅವಳಿರುತ್ತಿದ್ದಳು....... ಗಂಡನನ್ನು ಕಳೆದುಕೊಂಡೂ ಮುತ್ತೈದೆಯಂತೆ ಕಂಗೊಳಿಸುತ್ತಿದ್ದಾಳೆ ! ಆದರೆ ನಾನು...... ? ಅವಳಿಗೆ ನಾನು ಬಗೆದ ದ್ರೋಹಕ್ಕೆ ದೇವ್ರು ನನಗೀ ಶಿಕ್ಷೆ ಕೊಟ್ಟನೇನೋ....... ಅಂದೆ ಕೀರ್ತಿ ನನಗೆ ಛೀಮಾರಿ ಹಾಕಿ ಗಂಡನನ್ನು ಕರೆದುಕೊಂಡು ಹೋಗಿದ್ದಿದ್ದರೆ ನಾಸಿಂದು ಸುಖವಾಗಿರುತ್ತಿದೆ. ಆದರೆ ಅವಳು ತನ್ನದೆಲ್ಲವನ್ನೂ ನನಗೆ ಬಿಟ್ಟುಕೊಟ್ಟು ಹೋಗಿಬಿಟ್ಟಳು. ಎಲ್ಲವನ್ನೂ ಕಳೆದುಕೊಂಡವಳು ಎಷ್ಟು ನಿಶ್ಚಿಂತೆಯಿಂದಿದ್ದಾಳೆ......! ಎಷ್ಟು ಸುಖವಾಗಿ ದ್ದಾಳೆ......! ಆದರೆ ಎಲ್ಲವನ್ನು ಪಡೆದುಕೊಂಡ ನಾನು...... ?

ದುಃಖವುಕ್ಕಿ ಬಂತು ಆಕೆಗೆ. ದೂರದಲ್ಲಿ ಜನರ ಮಧ್ಯೆ ಹೋಗುತ್ತಿದ್ದ ಕೀರ್ತಿಯನ್ನು ಕೊನೆಯ ಬಾರಿಯೆಂಬಂತೆ ಕಣ್ಣರಳಿಸಿ ನೋಡಲು ಪ್ರಯತ್ನಪ ಟ್ಟಳು. ಆದರೆ ತುಂಬಿಬಂದ ಕಣ್ಣೀರು ಆಕೆಯ ಪ್ರಯತ್ನವನ್ನು ವ್ಯರ್ಥಗೊಳಿಸಿ, ಕೀರ್ತಿಯನ್ನು ಮರೆಮಾಡಿದ್ದವು.

* * *

# ಹೋರಾಟ

ಒಂದೆ ಕಡೆ ಆ ಊರಿನ ಹೊಲಸೆಲ್ಲ ಹರಿದು ಬಂದು ಸದ್ದಿಲ್ಲದೆ ಮೆಲ್ಲಗೆ, ಮಂದಗತಿಯಲ್ಲಿ ಹರಿಯುತ್ತಿದ್ದ ಹೊಳೆಯಲ್ಲಿ ಲೀನವಾಗುತ್ತಿತ್ತು. ಅಲ್ಲಿಯೇ ಪಕ್ಕಕ್ಕಿದ್ದ ಪಾಳುಮಂಟಪದ ಕಡೆಯ ಮೆಟ್ಟಲಲ್ಲಿ ಕುಳಿತು ಆ ಹೊಲಸು ಹೊಳೆ ಸೇರಿ ಆಗುತ್ತಿದ್ದ ಸಂಗಮದಲ್ಲಿ ಕಾಲಾಡಿಸುತ್ತ ತಮ್ಮಲ್ಲಿದ್ದ ಕೊಳೆತು, ಜೀರ್ಣವಾದಂತಿದ್ದ ಬಲೆಯನ್ನು ಆ ನೀರಿನೊಳಕ್ಕೆ ಇಳಿಬಿಟ್ಟು, ಅದರಲ್ಲಿ ಬೀಳುವ ಮೀನಿಗಾಗಿ ಕಾಯುತ್ತ ಕುಳಿತಿರುತ್ತಿದ್ದ ಪಡ್ಡೆ ಹುಡುಗರ ಸಣ್ಣ ಗುಂಪೊಂದು ಯಾವಾಗಲೂ ಅಲ್ಲಿರುತ್ತಲಿತ್ತು. ಆ ಜಾಗದಿಂದ ಇಪ್ಪತ್ತು ಅಡಿಗಳ ಅಂತರದಲ್ಲಿ ಒಂದು ಸಣ್ಣ ಬಂಡೆಗಳ ಸಮೂಹ. ಎದುರಿಗೆ ಒಂದು ಕಾಲುದಾರಿ. ಆ ಕಾಲುದಾರಿಗುಂಟ ಮತ್ತೊಂದು ಪಕ್ಕಕ್ಕೆ ಹುಲುಸಾಗಿ ಬೆಳದಿದ್ದ ಪೊದೆ. ಆ ಕಾಲುದಾರಿ ಸೀದಾ, ಎರಡು ದಿನಕ್ಕೊಮ್ಮೆ ದೊಡ್ಡ ಬಟ್ಟೆಗಳ ಹೊರೆ ಹೊತ್ತು ತಂದು ತನ್ನ ಮಾಮೂಲಿನ ಜಾಗವಾದ ಈ ಬಂಡೆಗಳ ಬುಡದಲ್ಲಿ ಅವುಗಳನ್ನು ಒಗೆದುಕೊಂಡು ಹೋಗುವ, ಯಾರೊಂದಿಗೂ ಹೆಚ್ಚು ಬೆರೆಯದ, ಹೆಚ್ಚು ಮಾತನಾಡದ ಮುಗ್ಧ ಹುಡುಗಿ ಲಕ್ಷ್ಮಿಯ ಕೇರಿಗೆ ಹೋಗುವ ದಾರಿ. ಹನ್ನೆರಡರ ನಂತರ ಆ ಪ್ರದೇಶ ಸಾಮಾನ್ಯವಾಗಿ ನಿರ್ಜನವಾಗಿ ಇರುತ್ತದೆ ಆ ಮೀನು ಹಿಡಿಯುವ ಹುಡುಗರ ಹೊರತು. ಆದರೆ ಲಕ್ಷ್ಮಿ ಮಾತ್ರ ಯಾವಾಗಂದರೆ ಆಗ ನಿರ್ಭಿತಳಾಗಿ ತನ್ನ ಬಟ್ಟೆಗಳೊಂದಿಗೆ ಹೋಗಿಬರುತ್ತಲಿದ್ದಳು. ಇಂದೂ ಕೂಡ ಅವಳು ಬಟ್ಟೆಯ ಹೊರೆಹೊತ್ತು ಬಂದಾಗ ಸೂರ್ಯನಾಗಲೇ ನೆತ್ತಿಯ ಮೇಲಿದ್ದ.

ಸರಸರನೆ ನಡೆದು ಬರುತ್ತಿದ್ದ ಲಕ್ಷ್ಮಿಗೆ ಪೊದೆಯ ಬಳಿ ಕೈಯಲ್ಲಿ ಬಾಟಲುಗಳೊಂದಿಗೆ ಅವುಗಳನ್ನು ಖಾಲಿ ಮಾಡಲು ಪ್ರಶಸ್ತವಾದ ಜಾಗಕ್ಕೆ ತಡಕಾಡುತ್ತಿದ್ದ,

ನಾಲ್ಕು ದಿನ ಚೇಂಜ್‌ಗೆಂದು ಬೆಂಗಳೂರಿಂದ ಈ ಚಿಕ್ಕ ಊರಿಗೆ ಬಂದಿದ್ದ ಆ ಊರಿನ ದೊಡ್ಡಕುಳ ಕುಲಕರ್ಣಿಯವರ ಮಗನ ನಾಲ್ವರು ಸ್ನೇಹಿತರು ಕಾಣು ವಂತಿರಲಿಲ್ಲ. ಆದರೆ ಅವರಾಗಲೇ ಈಕೆಯನ್ನು ಗಮನಿಸಿದ್ದರು. ಬಟ್ಟೆಯನ್ನು ಕೆಳಕ್ಕಿಳಿಸಿದ ಲಕ್ಷ್ಮಿ ಸೀರೆಯನ್ನೆತ್ತಿ ಮೇಲಕ್ಕೆ ಸಿಕ್ಕಿಸಿದಳು. ಮಿರಮಿರನೆ ಮಿಂಚುತ್ತಿದ್ದ ತೊಡೆಯ ಕೆಳಭಾಗ ಪೊದೆಯಲ್ಲಿ ತಡಕಾಡುತ್ತಿದ್ದವರ ಕಣ್ಣಿಗೆ ರಪ್ಪನೆ ರಾಚಿ, ಜಾಡಿಸಿ ಒದ್ದಂತಾಯ್ತು. ಸೆರಗನ್ನು ಎಳೆದು ಸಿಕ್ಕಿಸಿ, ಬಾಯಲ್ಲಿ 'ಹಿಸ್...... ಹಿಸ್.....' ಎಂಬ ಶಬ್ದ ಹೊರಡಿಸುತ್ತ, ಆ ಶಬ್ದಕ್ಕೆ ತಕ್ಕಂತೆ ತನ್ನ ದೇಹವನ್ನ ಮಣಿಸುತ್ತ, ಬಟ್ಟೆಗಳನ್ನು ಬೀಸಿ, ಬೀಸಿ ಸೆಳೆಯುತ್ತಿದ್ದ ಲಕ್ಷ್ಮಿಯ ತುಂಬು ಹರೆಯದ ಕುಲುಕಾಟ, ತೆರೆದ ತೊಡೆಯ ಭಾಗವನ್ನು ಕೌತುಕದಿಂದ ದಿಟ್ಟಿಸುತ್ತ, ಬೆಚ್ಚಗಾಗಿ ಒಬ್ಬರನ್ನೊಬ್ಬರು ತಬ್ಬಿ ಕೂತ ಹುಡುಗರು ಕೂತಲ್ಲಿಯೇ ತಿಣುಕಾಡ ತೊಡಗಿದ್ದರು.

ಇತ್ತ ಲಕ್ಷ್ಮಿಯ ಅಪ್ಪ ಸ್ಯಾಮಣ್ಣ ಮಗಳ ಮದುವೆಯ ವ್ಯಸನದಲ್ಲಿ ಬಳಲುತ್ತಿದ್ದ. ಇಡೀ ಕೇರಿಗೆ ತಕ್ಕಮಟ್ಟಿಗಿದ್ದ ನಿಂಗಯ್ಯನ ಒಬ್ಬನೇ ಮಗ ದೇವರಾಜು ಕೇರಿಯಲ್ಲೇ ಕಾಲೇಜು ಮೆಟ್ಟಲು ಹತ್ತಿದ ಮೊದಲಿಗ. ಈಗ ಎಂ.ಎ. ಮಾಡುತ್ತಿದ್ದ ಬಿಳುಪಾದ, ನುಣುಪಾದ ದೇವರಾಜುವಿಗೆ ಮಗಳನ್ನು ಕೊಡಬೇಕೆಂಬ ಮಹದಾಸೆಯನ್ನು ತನ್ನ ಗೆಳೆಯನ ಕಿವಿಗೆ ಹಾಕಿದ್ದರೂ ಇದುವರೆಗೆ ಅವನಿಂದ ಯಾವ ಉತ್ತರ ಬಾರದಿದ್ದುದು ಸ್ಯಾಮಣ್ಣನನ್ನು ಚಿಂತೆಗೀಡುಮಾಡಿತ್ತು. ಆದರೆ ನಿಂಗಯ್ಯನ ಕೈಯಲ್ಲಿ ಏನಿತ್ತು....... ಪಾಪ! ಹೈಸ್ಕೂಲಿನಿಂದಲೂ ಪೇಟೆ ನೋಡಿದ ದೇವರಾಜು ಇತ್ತೀಚೆಗೆ ತನ್ನೂರೆಂದರೆ ಮೂಗುಮುರಿಯುತ್ತಿದ್ದ. ಅಂತದ್ದರಲ್ಲಿ ಅಪ್ಪ ಮದುವೆಯ ಪ್ರಸ್ತಾಪ ಮುಂದಿಟ್ಟಾಗ ಸಿಡಿಮಿಡಿಯಾಗಿದ್ದ. "ಅಲ್ಲಪ್ಪ ನಾನಿಷ್ಟು ಕಷ್ಟಪಟ್ಟು ಓದಿದ್ದು, ಬರೆದದ್ದೆಲ್ಲ ಮದ್ವೆಯಾಗಕೇ ಅಂದ್ಕಂಡಿಯಾ.....? ನಾನಿನ್ನೂ ತುಂಬಾ ಓದ್ಬೇಕು...... ಏನೇನೋ ಸಾಧಿಸ್ಬೇಕು...... ನನ್ನ ಗುರಿ ಮುಟ್ಟೊತನಕ ಮದ್ವೆ ಬಗ್ಗೆ ನಾನು ಯೋಚ್ಸಲ್ಲ. ನೀನೂ ಯೋಚಿಸ್ಬೇಡ......" ನಿಂಗಯ್ಯ ಮಗ ಸಮಾಧಾನಗೊಳ್ಳಲಿ ಎಂದು ಸ್ವಲ್ಪ ತಡೆದು, ಮೆಲ್ಲನೆ ನುಡಿದಿದ್ದ "ಸರಿಕಣಪ್ಪ ಆಯ್ತು ನಿನ್ನಿಷ್ಟ ಬಂದಾಗೆ ಲಗ್ನಾಗು ಯಾರು ಬೇಡಂತಾರೆ..... ಆದ್ರೆ, ಆ ಹುಡ್ಗಿ ಲಕ್ಷ್ಮಿನ ಶಾಸ್ತ್ರಾನುಸಾರವಾಗಿ ಹೆಣ್ಣು ನಮ್ದು ಅಂತ ಮಾಡ್ಕೊಂಡು ಬಿಟ್ರೆ ಆತು......" ದೇವರಾಜು ಒಮ್ಮೆಗೆ ಗಹಗಹಿಸಿ ನಕ್ಕಿದ್ದ ಅಪ್ಪನ ಮಾತುಗಳನ್ನು ಕೇಳಿ. ತನ್ನ ನಗುವನ್ನು ನೋಡಿ ಅರಳಿದ ಅಪ್ಪನ ಮುಖವನ್ನೆ ದಿಟ್ಟಿಸುತ್ತ ಹೇಳಿದ್ದ "ಹೋಗಿ, ಹೋಗಿ ಆ ಹಳ್ಳಿನ ನನ್ನ ಕೊರಳಿಗೆ ಕಟ್ಟೋಕೆ ಹೊರಟಿದ್ದಿಯಲ್ಲಪ್ಪಾ..... ಆ ಪೇಟೆ ವಾತಾವರಣ ಹೇಗಿದೆ ಅಂತ ನಿಂಗೇನು ಗೊತ್ತು ಪಾಪ! ಅಲ್ಲಾ....... ಒಂದು ಮಗೂಗೆ ಶಾಲೆಯಲ್ಲಿ ಸೀಟು ಬೇಕಂದ್ರೆ ಮೊದ್ಲು ಆ ಮಗುವಿನ ಅಪ್ಪ, ಅಮ್ಮನ್ನ ಸಂದರ್ಶಿಸ್ತಾರೆ. ಅವರ ಹಿನ್ನೆಲೆ ಏನು? ಅವರು ಎಂತಹ ಜನ? ಅವರೆಷ್ಟು ಓದಿದ್ದಾರೆ.....? ಇವೆಲ್ಲ

ತಿಳ್ಕಂಡ್ಮೇಲೆ ಆ ಮಗೂಗೆ ಆ ಸ್ಕೂಲಲ್ಲಿ ಸೀಟು ಕೊಡ್ತಾರೆ. ಇಂತಹ ವಾತಾವರಣದಲ್ಲಿ ಆ ಹಳ್ಳಿನ ಕಟ್ಕೊಂಡ್ರೆ ನಾನು ಆ ಸಿಟಿ ಬಿಟ್ಬು ಬಂದು ಇಲ್ಲೇ ನಿನ್ನ ಹೊಲ್ದಾಗೆ ಕಳೆ ಕಿತ್ಗಂಡು ಕಾಲಕಳೀಬೇಕಷ್ಟೆ......" ನಗುತ್ತಿದ್ದವ ಒಮ್ಮೆಗೆ ಗಂಭೀರನಾದಾಗ ಅವ್ವ ನಾಗವ್ವ ಗಂಡನಿಗೇ ತಗಲಿಕೊಂಡಳು. "ಅಯ್ ಬಿಡ್ಬಾರ್ದ್ರ ಅತ್ಲಾಗೆ ಅದೆಲ್ಲಿದಚ್ಚಿದಿ....... ಆ ಹಳ್ಳಿವ್ಳೊದ್ದು ಕಟ್ಟಿ ಈ ಹುಡ್ಗ ಇಟ್ಟಿನ ಓದಿಬರ್ದಿದ್ನೆಲ್ಲ ಹೊಳ್ಯಾಗೆ ಹುಣ್ಸೆತೆಣ್ಣು ತೊಳ್ದಂಗೆ ತೊಳೀಬೇಕಂತ ಮಾಡಿಯೇನೂ....... ?" ಎಂದು ಮಗನ ಪರವಹಿಸಿ, ಅವನನ್ನು ಸಮಾಧಾನಗೊಳಿಸಿ ಅಂದೇ ಊರಿಗೆ ಕಳುಹಿಸಿಕೊಟ್ಟಿದ್ದಳು.

ನಿಂಗಯ್ಯ ಸ್ನೇಹಿತನಿಗೆ ವಿಷಯ ಹೇಗೆ ತಿಳಿಸುವುದೆಂದು ಒದ್ದಾಡುತ್ತಲೇ ಇದ್ದ. ಆದರೆ ಲಕ್ಕ್ಮಿಯ ಅವ್ವ ಕೆಂಚವ್ವಗೆ ತನ್ನ ಅಣ್ಣ ಬಸಪ್ಪನ ಮಗ ಧರಣೆಪ್ಪನಿಗೆ ತನ್ನ ಮಗಳನ್ನು ಕೊಡುವ ಆಸೆ. ನಿಂಗಯ್ಯನಿಗೊ ಧರಣೆಪ್ಪನ ನೆರಳೆಂದರೂ ಆಗದು. ಇದಕ್ಕೆ ಕಾರಣ ಇಲ್ಲದಿಲ್ಲ. ಧರಣೆಪ್ಪ ಎಸ್‌ಎಸ್‌ಎಲ್‌ಸಿ ಮುಗಿಸಿದ್ದ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ. ಆನಂತರ ಓದಿಗೆ ತಿಲಾಂಜಲಿಯಿತ್ತು ಹೋರಾಟ, ಚಳವಳಿ ಎಂದೆಲ್ಲ ಓಡಾಡುತ್ತ ಕೆಲ ಪುಢಾರಿ ರಾಜಕಾರಣಿಗಳ ಬಾಲಂಗೋಚಿಯಾಗಿದ್ದ. ಊರಿನಲ್ಲಿ ಎಲ್ಲೇ ಗದ್ದಲವಾದರೂ ಅವನ ಹೆಸರು. ಜಗಳ ಆಡಲೂ ಸೈ, ಜಗಳ ಬಿಡಿಸಿ ಪಂಚಾಯ್ತಿ ಮಾಡಲು ಸೈ. ನೋಡಿದೊಡನೆ 'ಶುದ್ಧ ಒರಟು' ಎಂಬ ಭಾವನೆ ಒತ್ತಿಕೊಂಡು ಬರುವಂತಿದ್ದ ಧರಣೆಪ್ಪನೆಂದರೆ ಅರ್ಧ ಊರಿಗೆ ಮೆಚ್ಚು ಅರ್ಧ ಊರಿಗೆ ರಚ್ಚು. ಸದಾ ನ್ಯಾಯ, ಅನ್ಯಾಯ ಎಂದು ಬಡಬಡಿಸುವ ಅವನ ಕಿವಿಗೆ ಅಪ್ಪಿತಪ್ಪಿ ಅನ್ಯಾಯ ಎಂಬ ಶಬ್ದ ಬಿದ್ದರೂ ಸಾಕು ಕಟಕಟನೆ ಹಲ್ಲು ಕಡಿದು, ದೇವರು ಬಂದವನಂತೆ ಮೈ ನಡುಗಿಸುತ್ತ 'ಹೋರಾಟ.....' ಎಂದು ಸಡ್ಡೊಡೆದು ನಿಲ್ಲೊ ಧರಣೆಪ್ಪ ಕೆಂಚವ್ವನ ದೃಷ್ಟಿಯಲ್ಲಿ ದೊಡ್ಡ 'ಓರಾಟಗಾರ'........ 'ಲೀಡರ‍್ರೂ'...... ಆದರೆ ಅದೇ ನಿಂಗಯ್ಯನ ದೃಷ್ಟಿಯಲ್ಲಿ ಕೆಲಸಕ್ಕೆ ಬಾರದ ಪುಂಡಪೋಕರಿ. ಅಪ್ಪ, ಅವ್ವನ ಈ ಪೈಪೋಟಿ ಕಿತ್ತಾಟ ನೋಡಿ "ನಾನು ಲಗ್ನಾಗಕ್ಕೆ ಇವ್ರ್ಯಾಕೆ ಹಿಂಗೆ ಕಿತ್ತಾಡ್ಬೇಕು......" ಅಂದುಕೊಂಡು ನಗು ಬರುತ್ತಿತ್ತು ಲಕ್ಕ್ಮಿಗೆ. ಅದ್ಯಾಕೋ ಅಪ್ಪ, ಅವ್ವ ಎಂದೂ ಇಲ್ಲದವರು ಅಂದು "ನಿನ್ನ ಮನ್ಸು ಹೆಂಗವ್ವ ಲಕ್ಕ್ಮಿ..... ?" ಎಂದು ಕೇಳಿದಾಗ ತಡವರಿಸದೆ ತಟ್ಟನೆ ಉತ್ತರಿಸಿದ್ದಳು. "ನೀವಿಬ್ರೂ ಕಿತ್ತಾಡ್ದಂಗೆ ಸಮಾಧಾನ್ದಿಲಿ ಏನೇ ನಿರ್ಧಾರ ತಗಂಡ್ರೂ ನಾನಂಗೆ ಕಣ್ಣಪ್ಪ....." ಎಂದಿದ್ದಳು.

ಅದೇ ಗುಂಗಿನಲ್ಲಿ ಬಟ್ಟೆಗಳನ್ನು ತೊಳೆದು, ಜಾಲಾಡಿ, ಹಿಂಡಿ ಹೊರೆಕಟ್ಟಿ, ಸೊಂಟಕ್ಕೇರಿಸಿ, ಮೇಲಕ್ಕೆ ಸಿಗಿಸಿದ್ದ ಸೀರೆ ಸರಿಪಡಿಸಿಕೊಂಡು ಬಂಡೆಗಳನ್ನು ಸಾಗಿ ಬಂದು ಕಾಲುದಾರಿಗೆ ತಲುಪಿದಳಿಲ್ಲೊ "ಸಿಕ್ತು...... ! ಸಿಕ್ತು...... !" ಎಂದು ಹುಯಿಲೆಬ್ಬಿಸಿ, ಕೂಗಾಡತೊಡಗಿದರು ಮೀನು ಹಿಡಿದ ಹುಡುಗರು. ಇವರ ಕೂಗಾಟ, ಕೇಕೆ ಪೊದೆಯಲ್ಲಿ ಕುಳಿತು ಹೊಂಚುತ್ತಿದ್ದವರಿಗೆ ಹಾಸಿಗೆ ಹಾಸಿದಂ

ತಾಯ್ತು. ಕೇರಿಯತ್ತ ಹೊರಟ ಲಕ್ಷ್ಮಿ ಪೊದೆಯೊಳಕ್ಕೆ ಸೆಳೆಯಲ್ಪಟ್ಟಿದ್ದು...... ನಾಲ್ವರಲ್ಲಿ ಇಬ್ಬರು ಹೆದರಿ ಮೆಲ್ಲನೆ ಕಂಬಿಕಿತ್ತದ್ದು...... ಉಳಿದ ಇಬ್ಬರು ತಪ್ಪಿಸಿಕೊಳ್ಳಲು ಹೆಣಗಾಡುತ್ತಿದ್ದ ಲಕ್ಷ್ಮಿಗೆ ಮುಗಿಬಿದ್ದದ್ದು....... ಇದ್ಯಾವುದೂ ಆ ಹುಡುಗರ ಗಲಾಟೆಯಲ್ಲಿ ಕೇಳದಾಯ್ತು; ಕಾಣದಾಯ್ತು. ಹೊತ್ತು ಮುಳುಗಲು ಬಂದರೂ ಮನೆಗೆ ಬಾರದ ಮಗಳನ್ನು ಹುಡುಕಿ ಬಂದ ಕೆಂಚವ್ವ ಪೊದೆಯ ಬಳಿ ಅರೆಬರೆ ಪ್ರಜ್ಞೆಯಲ್ಲಿ ಬಿದ್ದ ಮಗಳನ್ನು ಕಂಡು ಹೌಹಾರಿ ನಿಂತಳು. ಕೇರಿಕೇರಿಯೇ ಸ್ಯಾಮಣ್ಣನ ಮನೆಯತ್ತಿರ ಸೇರಿತು. ಒಂದೇ ಕ್ಷಣದಲ್ಲಿ ಲಕ್ಷ್ಮಿಯನ್ನು ಯಾರೋ ಅಪರಿಚಿತರು ಕೆಡಿಸಿ, ಹೊಳೆದಂಡ್ಯಾಗೆ ಬಿಸಾಡಿದ ಸುದ್ದಿ ಊರಲ್ಲೆಲ್ಲಾ ಹಬ್ಬಿತು. ಆ ಕ್ಷಣವೇ ಕುಲಕರ್ಣಿ ತನ್ನ ಮಗನನ್ನು, ಅವನ ಸ್ನೇಹಿತರನ್ನು ಊರು ಬಿಡಿಸಿದ.

ಕಂಗಾಲಾಗಿ, ಕಣ್ಣೀರಿಡುತ್ತ ತಲೆಯ ಮೇಲೆ ಕೈಹೊತ್ತು ಕುಳಿತ ಅತ್ತೆ ಮಾವನನ್ನು ಧರಣೆಪ್ಪ ಸಮಾಧಾನಗೊಳಿಸುತ್ತಿದ್ದ. ಸದಾ ನಗುನಗುತ್ತ ಕಳೆಕಳೆಯಾಗಿ, ಚೂಟಿಯಾಗಿ ಏನಾದರೊಂದು ಕೆಲಸ ಮಾಡುತ್ತ ಓಡಾಡುತ್ತಿದ್ದ ಲಕ್ಷ್ಮಿ ಸೋತು ಸೊರಗಿದ್ದಳು. ಹನಿ ನೀರೂ ಮುಟ್ಟದೆ, ಮಂಡಿಯೊಳಗೆ ಮುಖವುದುಗಿಸಿ, ಗುಬ್ಬಚ್ಚಿಯಂತೆ ಮುದುರಿ ಕತ್ತಲಕೋಣೆಯ ಮೂಲೆ ಹಿಡಿದು ಬಿಕ್ಕುವುದನ್ನು ನೋಡಿದ ಧರಣೆಪ್ಪ ಚಲಿಸಿಹೋದ. ಕುಕ್ಕರಗಾಲಲ್ಲಿ ಅವಳ ಮುಂದೆ ಕೂತು, ಮಂಡಿಯೊಳಕ್ಕೆ ಹುದುಗಿದ್ದ ಮುಖವನ್ನು ಬಲವಂತದಿಂದ ಮೇಲೆತ್ತಿ, ತನ್ನ ಅಂಗೈಯಲ್ಲಿಡಿದು ದೃಢವಾಗಿ ನುಡಿದ "ಲಕ್ಷ್ಮಿ ನಿನ್ನ ಈ ಸ್ಥಿತಿಗೆ ಯಾರೇ ಕಾರಣ ಆಗಿರ್‍ಲಿ ಅವರನ್ನ ಹಿಡಿಸಿ, ಶಿಕ್ಷಿಸಿಸುವವರೆಗೆ ನಾನು ಅನ್ನ ನೀರು ಮುಟ್ಟಲ್ಲ ನಿನ್ನಾಣೆಗು....." ಅವಳ ಕಂಗಳಿಂದ ಒಂದೇಸಮನೆ ಸುರಿಯುವ ಕಂಬನಿಯನ್ನು ತೊಡೆಯುತ್ತ "ನೋಡು ಲಕ್ಷ್ಮಿ ನಾನು ಜೀವಂತ ಇರೋತನ್ಕ ನೀನು ಯಾವುದಕ್ಕೂ ಹೆದರ್‍ಬೇಡ, ಕಂಗಾಲಾಗ್ಬೇಡ...... ಏನೇ ಆಗಿರ್‍ಲಿ ನಾನು ನಿನ್ನ ಕೈ ಬಿಡಲ್ಲ....." ಎಂದು ಸಣ್ಣಮಗುವನ್ನು ರಮಿಸುವಂತೆ ಅವಳನ್ನು ರಮಿಸಿದ. ಸ್ಯಾಮಣ್ಣ ಧರಣೆಪ್ಪ ಕಾಲನ್ನು ಗಟ್ಟಿಯಾಗಿ ಹಿಡಿದು ಗೋಳೋ ಎಂದುಬಿಟ್ಟ. "ನಾನು ನಿನ್ನ ತಪ್ಪು ತಿಳ್ಕಿದ್ನಲ್ಲೋ ಧರಣ್ಯ..... ತಪ್ಪು ತಿಳಿದಿದ್ದೆ...... ನಮ್ಮ ಅಳಿವು ಉಳಿವು ಎಲ್ಲಾ ನಿನ್ನ ಕೈಯಾಗೈತಪ್ಪ......" ಎಲ್ಲರನ್ನೂ ಸಮಾಧಾನಗೊಳಿಸಿದ ಧರಣೆಪ್ಪ ಅಲ್ಲಿಯೇ ಇದ್ದ ನಿಂಗಯ್ಯನಿಗೆ ದೇವರಾಜುವನ್ನು ಕರೆಸಲು ಹೇಳಿದ. "ಅವ್ನು ಕಾನೂನುಕಟ್ಟಳೆ ಓದಿ ತಿಳ್ಕಂಡಿರೋನು........ ನಮ್ಮ ಹೋರಾಟಕ್ಕೆ ಮಾರ್ಗದರ್ಶಕನಾಗಿ ಇರ್‍ಲಿ ಬೇಗ ಕರ್‍ಸು ಸಣ್ಣಪ್ಪ....." ಎಂದಿದ್ದ. ಆಗಲೇ ಒಬ್ಬ ಆಳನ್ನು ಮಗನನ್ನು ಕರೆತರಲು ಕಳಿಸಿದ ನಿಂಗಯ್ಯ. ಊರಿನಲ್ಲಿ ಯಾರಾದರೂ ಹೊಸಬರು ಕಣ್ಣಿಗೆ ಬೀಳುವರೋ ಎಂಬುದನ್ನು ತಿಳಿಯಲು ಕೆಲವರನ್ನು ಬಿಟ್ಟ ಧರಣೆಪ್ಪ ತಾನು ತಮ್ಮವರನ್ನು ಸಂಘಟಿಸುವತ್ತ ಗಮನ ಕೊಟ್ಟ. ಮಾವನನ್ನು ಕರೆದೊಯ್ದು ಕಂಪ್ಲೇಂಟ್ ಕೊಟ್ಟು ಬಂದ. ತನಗೆ ಗೊತ್ತಿದ್ದ ಕೆಲವು ರಾಜಕೀಯ ವ್ಯಕ್ತಿಗಳ ಸಹಾಯದಿಂದ ಪೇಪರಿನವರಿಗೆ ಸುದ್ದಿ ಮುಟ್ಟಿಸಿದ. ತನ್ನೂರಿನ,

ಪಕ್ಕದೂರಿನ ತಮ್ಮವರಾದ ಹಿರಿಯರು, ಹುಡುಗರನ್ನೆಲ್ಲ ಸೇರಿಸಿದ. ಪೋಲಿಸರು ವಿಚಾರಣೆ ಮಾಡಲು ಲಕ್ಷ್ಮಿಯನ್ನು ಪ್ರಶ್ನಿಸಿದಾಗ ಆಕೆ ಅವರ ಯಾವ ಪ್ರಶ್ನೆಗೂ ಸಮರ್ಪಕವಾಗಿ ಉತ್ತರಿಸಲಿಲ್ಲ. ಅವರ್ಯಾರು ? ಎಲ್ಲಿಯುವರಿರಬಹುದು ? ಹೇಗಿದ್ದರು ? ಅವರ ಚರ್ಯೆ ಯಾವುದರ ಬಗ್ಗೆಯೂ ಅವಳು ಹೇಳದಾದಳು. ಆದರೆ ಈ ಸುತ್ತಮುತ್ತಲ ಊರಿನವರಂತು ಖಂಡಿತ ಅಲ್ಲ ಎಂಬುದನ್ನು ಮಾತ್ರ ದೃಢಪಡಿಸಿದಳು. ಎಸ್ಐ "ಈ ಊರಿನ ಯಾರ ಮನೆಗಾದರೂ ಬಂದಿರಬಹುದಾದ ಹೊಸಬರಾದ ಅತಿಥಿಗಳು, ಪರಿಚಿತರು ಇದ್ದರೆ ಒಮ್ಮೆ ನೋಡಿ......" ಎಂದಾಗ ಅವರೊಡನೆಯೇ ಓಡಾಡುತ್ತಿದ್ದ ಕುಲಕರ್ಣಿಯು ಎದೆಗೆ ಒದ್ದಂತಾಯ್ತು. ಇಷ್ಟೆಲ್ಲ ನಡೆಯುವ ಹೊತ್ತಿಗೆ ದೇವರಾಜುವನ್ನು ಕರೆಯಲು ಹೋದ ಆಳು ಅವನ ಚೀಟಿಯೊಂದಿಗೆ ಮರಳಿದ. ಅದರಲ್ಲಿ ಸ್ಪಷ್ಟವಾಗಿ ಬರೆದಿದ್ದ ದೇವರಾಜು "ಸುಮ್ಮನೆ ಇಂತಹ ಚಿಲ್ಲರೆ, ತರ್ಲೆ ಕೆಲ್ಸಕ್ಕೆಲ್ಲ ನನ್ನ ಕರೀಬೇಡ. ಈಗಾಗ್ಲೆ ಕೆಟ್ಟು ಕೆರಹಿಡ್ದಿರೋ ಆ ಹುಡ್ಗಿನ ಇಟ್ಕಂಡು ಅದೇನ್ ಹೋರಾಟ ಮಾಡ್ತಿರಿ..... ? ಸುಮ್ನೆ ಒಳಗೊಳ್ಗೆ ಯಾವನ್ದನ ಕುತ್ತಿಗೆಗೆ ಕಟ್ಟಿ ನಡೀ ಅನ್ರಿ ಇಲ್ಲಂದ್ರೆ ಯಾವ್ದನ ಕೆರೆನೋ ಬಾವಿನೋ ನೋಡ್ಕಳ್ಲಿ ನಿಮ್ಮ ಪಾಡಿಗೆ ನೀವಿದ್ದುಬಿಡ್ರಿ. ನನ್ನ ಮಾತ್ರ ಇಲ್ಲದ ತಾಪತ್ರಯಗಳಿಗೆ ಎಳೀಬೇಡ್ರಿ...." ಇಡೀ ಊರಿಗೆ ಊರೇ ಆ ಹುಡುಗಿಗಾಗಿ ಮರುಗಿ, ಹೋರಾಟಕ್ಕೆ ಸಿದ್ಧವಿರುವಾಗ ವಿದ್ಯಾವಂತ, ಬುದ್ಧಿವಂತನಾದ ಮಗನ ಈ ಧೋರಣೆಯಿಂದ ನೊಂದುಕೊಂಡ ನಿಂಗಯ್ಯ "ಅವ್ನು ಊರಲ್ಲೆ ಇರ್ಲಿಲ್ವಂತೆ...." ಎಂದು ಸುಳ್ಳಾಡಿದ.

ಆದರೇನು ಧರಣಪ್ಪ ಜಗ್ಗಲಿಲ್ಲ. ತನ್ನ ಭಾಷಣ, ಘೋಷಣೆಗಳಿಂದ ಎಲ್ಲರನ್ನು ಪ್ರಚೋಧಿಸಿ, ಹೆಂಗಸರನ್ನೂ ಬೀದಿಗೆಳೆದ. ಎಲ್ಲರೊಡನೆ ಹೋಗಿ ಸಂಬಂಧಪಟ್ಟವರಿಗೆಲ್ಲ ನ್ಯಾಯಕೋರಿ ಮನವಿ ಸಲ್ಲಿಸಿದ. ಇಂತಹ ಕುತೂಹಲಕರ ಸುದ್ದಿಗಾಗಿ ಕಾಯುತ್ತಿದ್ದ ಪತ್ರಕರ್ತರು ಸುದ್ದಿಗೆ ಮತ್ತಷ್ಟು ಬಣ್ಣ ಸೇರಿಸಿ ದಿನವೂ ತಮ್ಮ ಪತ್ರಿಕೆಗಳಲ್ಲಿ ಬಿತ್ತರಿಸತೊಡಗಿದರು. ಪುಂಡಪೋಕರಿ, ಕೆಲಸಕ್ಕೆ ಬಾರದ ಧರಣೆಪ್ಪ ವಿಜೃಂಭಿಸತೊಡಗಿದ. ಇಷ್ಟಾದರೂ ದಿನಗಳು ಯಾವ ಆಶಯ ತೋರದೆ ವ್ಯರ್ಥವಾಗಿ ಕಳೆಯುವುದನ್ನು ಗಮನಿಸಿ ಹೆಣ್ಣುಮಕ್ಕಳನ್ನು ಆಮರಣಾಂತ ಉಪವಾಸ ಕೈಗೊಳ್ಳಲು ಪ್ರೇರೇಪಿಸಿ, ಕೂರಿಸಿಯೇಬಿಟ್ಟ. ಯಾಕೊ ಧರಣೆಪ್ಪನ ಹೋರಾಟ ದಿನೇದಿನೇ ವಿಪರೀತಕ್ಕೆ ಇಟ್ಟುಕೊಳ್ಳುತ್ತಿರುವುದನ್ನು ಗಮನಿಸಿದ ಕುಲಕರ್ಣಿಯು ಫೋನು ಒಳಗೊಳಗೆ ಕೆಲಸ ಮಾಡಹತ್ತಿತು. ಅಪರಾಧಿಗಳನ್ನು ಲಕ್ಷ್ಮಿಯೇ ನೋಡಿದ್ದು ಅವರ್ಯಾರೆಂದು ಗುರುತಿಸಲು, ಅವರ ಬಗ್ಗೆ ಸುಳಿವು, ಮಾಹಿತಿ ಕೊಡಲು ಅಸಮರ್ಥಳಾದ ಕಾರಣ ಅಪರಾಧಿಗಳನ್ನು ಹಿಡಿಯುವಲ್ಲಿ ವಿಳಂಬವಾಗುತ್ತಿದೆ ಎಂಬ ಹೇಳಿಕೆಗಳು ಪ್ರಕಟವಾಗುತ್ತಿದ್ದಂತೆ ಸರ್ಕಾರ ಲಕ್ಷ್ಮಿಯು ಮುಂದಿನ ಸುಭದ್ರ ಜೀವನಕ್ಕಾಗಿ ಒಂದೂವರೆ ಲಕ್ಷ ಹಾಗು ತಿಂಗಳಿಗೆ ಒಂದು ಸಾವಿರ ಸಂಬಳ ಬರುವಂತೆ ಕೆಲಸವೊಂದನ್ನು ನೀಡುವುದಾಗಿ ಘೋಷಿಸಿತು.

ಕುಲಕರ್ಣಿಯವರು ತಮ್ಮೂರಿನ ಹೆಣ್ಣು ಮಗುವಿನ ಮೇಲಾದ ದೌರ್ಜನ್ಯಕ್ಕೆ ಮರುಗಿ, ಅವಳ ಭವಿಷ್ಯ ಭದ್ರವಾಗಲಿ ಎಂದು ಹಾರೈಸಿ ತಮ್ಮದೊಂದು ಜಾಗದಲ್ಲಿ ಅವಳಿಗೊಂದು ಸೈಟು ಬರೆದು ಎಲ್ಲರ ದೃಷ್ಟಿಯಲ್ಲಿ ದೈವಸಮಾನರಾದರು. ಅಪರಾಧಿಗಳು ಇನ್ನೂ ಸಿಗಲಿಲ್ಲ ಎಂಬುದೊಂದು ಬಿಟ್ಟರೆ ಲಕ್ಷ್ಮಿಯ ಜೀವನಕ್ಕೆ ಬೇಕಾದ ಎಲ್ಲಾ ಸೌಲಭ್ಯಗಳು ದೊರಕಿದವು. ಊರಿಗೆ ಊರೇ ಧರಣೆಪ್ಪನನ್ನು ಕೊಂಡಾಡಹತ್ತಿತು. ಆದರೆ ಅವನಿಗೆ ಇದ್ಯಾವುದರತ್ತ ಗಮನವಿರಲಿಲ್ಲ. ಇನ್ನೂ ಬಾರದ ಲಕ್ಷ್ಮಿಯ ಕೆಲಸದ ಆರ್ಡರಿಗಾಗಿ ಓಡಾಡುತ್ತಿದ್ದ. ಹೇಗಾದರೂ ಲಕ್ಷ್ಮಿ ಮೊದಲಿನಂತಾದರೆ ಸಾಕು ಎನ್ನುವುದೊಂದೆ ಅವನ ಹಾರೈಕೆ. ಆರ್ಡರ್ ತರಲು ಬೆಂಗಳೂರಿಗೆ ಕುಲಕರ್ಣಿಯವರೊಡನೆ ಹೊರಟುನಿಂತಿದ್ದ ಧರಣೆಪ್ಪನ ಕಾಲಿಗೆ ಬಿದ್ದು ಲಕ್ಷ್ಮಿ "ನೀವು ನನ್ನ ಪಾಲಿನ ದೇವ್ರು....." ಎಂದು ಪಿಸುನುಡಿದಾಗ ಅತ್ಯಂತ ಪ್ರೇಮದಿಂದ ಆಕೇನ ಹಿಡಿದೆತ್ತಿ "ನಮ್ಮಿಬ್ಬರ ನಡುವೆ ಅಷ್ಟು ದೊಡ್ಡ ಮಾತು ಬೇಡ ಲಕ್ಷ್ಮಿ ನೀನು ಮೊದಲಿನಂಗೆ ನಗುತ್ತ ಇದ್ರೆ ಅಷ್ಟೆ ಸಾಕು ನನ್ಗೆ......." ಎಂದು ತನ್ನ ಕೈಗಳನ್ನು ಭದ್ರವಾಗಿ ಹಿಡಿದು ನಿಂತಿದ್ದ ಲಕ್ಷ್ಮಿಯಿಂದ ಮೆಲ್ಲನೆ ಕೈಗಳನ್ನು ಬಿಡಿಸಿಕೊಂಡು, ಅವಳ ಕೈಗಳನ್ನು ಮೃದುವಾಗಿ ಅಮುಕಿ "ಬೇಗ ಬಂದ್ಬಿಡ್ತೀನಿ........" ಎಂದು ಹೇಳಿ ಹೊರಟುಹೋದ.

ಅವನತ್ತ ಹೋಗುತ್ತಿದ್ದಂತೆ ಸ್ಯಾಮಣ್ಣನ ಮನೆಯಲ್ಲಿ ಕೂತು ಲಕ್ಷ್ಮಿಗೆ ಧೈರ್ಯ ನೀಡುತ್ತ, ಹಿತವಚನ ಹೇಳುತ್ತಿದ್ದ ನಿಂಗಯ್ಯ, ನಾಗವ್ವನ ಕಿವಿಯಲ್ಲಿ, ದೇವರಾಜುವನ್ನು ಕರೆಯಲು ಹೋಗಿದ್ದ ಆಳು ಓಡೋಡಿ ಬಂದು "ದೇವರಾಜಣ್ಣ ಬರ್‍ತಾ ಅವ್ನೆ......" ಎಂದಾಗ ಒಳಗೊಳಗೆ ಅಳುಕಿದ ನಿಂಗಯ್ಯ ಹೆಂಡತಿಗೆ ಸನ್ನೆ ಮಾಡಿ ಎಬ್ಬಿಸಿಕೊಂಡು ಹೊರಟ. ಅಷ್ಟರಲ್ಲಿ ಆಗಲೇ ದೇವರಾಜು ಸ್ಯಾಮಣ್ಣನ ಮನೆಬಾಗಿಲಲ್ಲಿ ನಿಂತಿದ್ದ. "ನಡಿಯಪ್ಪ ದೇವರಾಜು ಹೋಗನ ಇದೋ ಬಂದ್ವಿ....." ಎಂದು ಹೊರಗೆ ಹೊರಟ ನಿಂಗಯ್ಯನನ್ನು ತಡೆದು "ಇರ್ಲಿ ಕೂತ್ಕಪ್ಪ ನಾನು ಇಲ್ಲಿಗೆ ಬಂದೆ. ಸ್ಯಾಮಪ್ಪನ್ನ, ಲಕ್ಷ್ಮಿನ ಮಾತಾಡ್ಸಕಂಡು ಹೋಗೋಣಾಂತ ಬಂದೆ....." ಎಂದ. "ನಾನು ಊರಲ್ಲಿರ್‍ಲಿಲ್ಲ. ಟೂರಲ್ಲಿದ್ದೆ. ನಿನ್ನೆ ತಾನೇ ಬಂದೆ. ಬಂದ ತಕ್ಷಣ ವಿಷ್ಯ ತಿಳ್ದು ಹಾಗೇ ಬಂದ್ಬಿಟ್ಟೆ...... ಅಪರಾಧಿಗಳು ಸಿಕ್ರಾ...... ?" ಎಂದು ಕೇಳಿದ. ನಿಂಗಯ್ಯನಿಗೆ ಒಮ್ಮೆಲೆ ತಲೆಚಕ್ರ ಬಂದಂತಾಗಿ, ಕೆಳಕೆ ಬೀಳದಂತೆ ನಿಲ್ಲಲು ಆಸರೆಗಾಗಿ ಪಕ್ಕದಲ್ಲಿದ್ದ ನಾಗವ್ವನನ್ನೆ ಬಳಸಿಹಿಡಿದ. ದೇವರಾಜುನ ಮಾತು, ಠೀವಿ, ಪಟ್ಟಣದ ನಾಜೂಕು ಕಳೆಯಿಂದ ಕೂಡಿದ ವಿದ್ಯಾವಂತನ ಗತ್ತು, ಇಸ್ತ್ರಿ ಮಾಡಿದ ಶುಭ್ರವಾದ ಉಡುಗೆ ಜನರನ್ನು ಸ್ಯಾಮಣ್ಣನ ಮನೆಯತ್ತ ಸೆಳೆಯುತೊಡಗಿತು. ಸ್ಯಾಮಣ್ಣ ಚಿಕ್ಕ ಮಗನಿಗೆ ಖುರ್ಚಿ ತರಲು ಹೇಳಿದ. ಲಕ್ಷ್ಮಿ ನಿಂತಿದ್ದ ಕಡೆ ಅವಳ ಪಕ್ಕಕ್ಕೆ ಕುರ್ಚಿ ಹಾಕಿಕೊಂಡು ಕುಳಿತ ದೇವರಾಜು "ನೀವಿಷ್ಟು ಜನರಿದ್ರೂ ಅಪರಾಧಿಗಳನ್ನ ಹಿಡ್ದು, ಶಿಕ್ಷಿಸ್ಲಿಕ್ಕೇ ಆಗ್ಲಿಲ್ಲ ಅಂದ್ರೆ ಏನಾಯ್ತು.... ?" ಎಂದ. ಅವನ ಮಾತಿನಿಂದೇಕೋ ಇರುಸುಮುರುಸಾಗಿ, ತಡಿಯಲಾರದೆ ಧರಣೆ

ಪ್ಪನ ಅಪ್ಪ ಬಸಣ್ಣ ಅಂದಿನಿಂದ ಇಂದಿನವರೆಗೆ ನಡೆದದ್ದೆಲ್ಲ ಚಾಚೂತಪ್ಪದೆ ವಿವರಿಸಿದ. ದೇವರಾಜು ಅದೇ ಶೀವಿಯಲ್ಲಿ ಮಾತಾಡತೊಡಗಿದ. "ಸರಿ, ಸರಿ ನೀವು ಹೇಳೋದೆಲ್ಲ ಸರಿ. ದುಡ್ಡು, ಸೈಟು ಕೆಲಸ ಲಕ್ಷ್ಮಿಗೆ ಮುಂದಿನ ಜೀವನಕ್ಕೆ ದಾರಿ ಮಾಡಬಹುದು ಅದು ಸರಿ. ಆದ್ರೆ ಅವಳ ಭವಿಷ್ಯ ಏನು? ಈ ಕ್ರೂರಸಮಾಜ ಒಂದು ಶೀಲಗೆಟ್ಟ ಹೆಣ್ಣಿಗೆ ಕೊಡೋ ಸ್ಥಾನಮಾನ ಏನಂತ ನಿಮಗ್ಗೊತ್ತಾ......? ಈ ಅಸಹಾಯಕ, ಮುಗ್ಧ ಹೆಣ್ಣು ಒಬ್ಬಂಟಿಯಾಗಿ ಇಡೀ ಸಮಾಜನ ಎದುರಿಸಿ ಬದುಕೋಕೆ ಸಾಧ್ಯವಾ.....? ಈಗಾಗ್ಲೆ ಹೆಚ್ಚುಕಮ್ಮಿ ಇಡೀ ರಾಜ್ಯಕ್ಕೆ ಪ್ರಚಾರ ಆಗಿರೋ ಇವಳ ಸುದ್ದಿ ನಾಳೆ ಇವಳು ಹೋದಡೆಯಲ್ಲೆಲ್ಲಾ, ಇವಳ ಹಿಂದೆ ಮುಂದೆ ಚರ್ಚೆ ಆಗದೆ ಇರುತ್ತಾ......? ಇದರ ಬಗ್ಗೆ ನಿಮಗೆ ಸ್ವಲ್ಪವಾದರೂ ಅರಿವಿದ್ದಿದ್ದರೆ ಇಷ್ಟು ದೊಡ್ಡ ನಾಟಕ ಆಡುತ್ತಿರಲಿಲ್ಲ. ಅರೆ, ಹೋರಾಟ ಮಾಡೋದು, ಪ್ರಚಾರ ಮಾಡೋದು, ಪರಿಹಾರ ಕೇಳೋದು ಇದೆಲ್ಲ ಸುಲಭಾರೀ ಬಹಳ ಸುಲಭ ಆದರೆ ನೀವೆಲ್ಲ ಸೇರಿ ಈ ಹೆಣ್ಣು ಶೀಲಗೆಟ್ಟಿದೆ ಅಂತ ಇಷ್ಟೆಲ್ಲ ಮಾಡಿರೋ ಪ್ರಚಾರನ ಈ ಮುಗ್ಧ ಹೆಣ್ಣು ಅರಗಿಸಿಕೊಳ್ಳೋದು ಹೇಗೆ......? ಒಂದು ಹೆಣ್ಣಿನ ಶೀಲವನ್ನು ಮುಂದಿಟ್ಟುಕೊಂಡು ಹೋರಾಟ ಮಾಡಿ ಪ್ರಚಾರ ಪಡೆಯೋದೂ..... ಆ ನೆಪದಲ್ಲಿ ದೊಡ್ಡ ವ್ಯಕ್ತಿಗಳ ಜತೇಲಿ ಓಡಾಡಿ ನಾಯಕರಾಗೋದೂ..... ಇದೆಲ್ಲ ಅವಶ್ಯಕತೆ ಇತ್ತಾ.....? ಹೋಗ್ಲಿ ಇಷ್ಟೆಲ್ಲಾ ಮಾಡಿದ್ದಕ್ಕೇ ಅಪರಾಧಿಗಳು ಸಿಕ್ರಾ......?" ಒಂದು ಕ್ಷಣ ತನ್ನ ಮಾತು ನಿಲ್ಲಿಸಿ ಅಲ್ಲಿ ಸೇರಿದ್ದವರನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿದ.

ಎಲ್ಲರೂ ಉಸಿರಾಡುವುದನ್ನು ಮರೆತು ತನ್ನತ್ತ ನೆಟ್ಟಿರುವ ನೋಟದಲ್ಲೆಲ್ಲ ತಾನೇ ಕಾಣಿಸಿ ಪಕ್ಕಕ್ಕೆ ತಿರುಗಿದರೆ ಲಕ್ಷ್ಮಿಯ ಕಣ್ಣುಗಳಲ್ಲೂ ತನ್ನ ಛಾಯೆ! ಎದ್ದು ನಿಂತ ದೇವರಾಜು "ಲಕ್ಷ್ಮಿ ಇಲ್ಲಿ ಬಾ...." ಎಂದಾಕೆಯನ್ನ ಕರೆದ. ಅದೇ ಗತ್ತು, ಅದೇ ಶೀವಿ. ಕೀಲಿ ಕೊಟ್ಟ ಬೊಂಬೆಯಂತೆ ಲಕ್ಷ್ಮಿ ಪಕ್ಕಕ್ಕೋಗಿ ನಿಂತಳು. ಆಕೆಯನ್ನು ಬಲತೋಳಿನಿಂದ ಬಳಸಿ ಹಿಡಿದು ಅಲ್ಲಿ ನೆರದಿದ್ದವರನ್ನು ಉದ್ದೇಶಿಸಿ ಮಾತಾಡತೊಡಗಿದ. "ನೋಡ್ರಿ, ನೋಡ್ರಿ ಎಲ್ರೂ ಹೇಗಿದ್ದ ಹುಡುಗಿ ಹೇಗಿದ್ದಾಳೆ ಅಂತ...... ಇವ್ಳಿಗೆ ಬೇಕಾಗಿರೋದು ನಿಮ್ಮ ಹೋರಾಟ, ಚಳವಳಿ ನಿಮ್ಮ ಹಣ ಅಂತಸ್ಥಲ್ಲ. ಆದರೆ, ಇವ್ಳಿಗೆ ಬೇಕಾಗಿರೋದು ನೆಮ್ಮದಿಯಾದ ಬಾಳು, ಗೌರವ ಸಮಾನವಾದ ಬಾಳು. ಇಷ್ಟೆಲ್ಲ ರಂಪ ರಾದ್ಧಾಂತ ಮಾಡುವ ಬದಲು, ಈ ಅಸಹಾಯ ಹೆಣ್ಣುಮಗಳ ಶೀಲವನ್ನು ಮುಂದೆ ಮಾಡಿ ಹೋರಾಟ ಮಾಡಿ, ಪ್ರಚಾರ ಮಾಡಿ, ಪರಿಹಾರ ಕೇಳಿ ಲೀಡರ್‌ಗಳಾಗುವ ಬದಲು ಆಗಲೇ ಆ ಕ್ಷಣವೇ ಇವಳ ಕುತ್ತಿಗೆಗೆ ಒಂದು ತಾಳಿ ಕಟ್ಟಿದ್ದರೇ ಇವಳ ಬಾಳು ನೇರವಾಗುತ್ತಿರಲಿಲ್ವೆ? ಈಕೆಗೆ ತಲೆಯುತ್ತಿ ಬದುಕುವ ಅವಕಾಶ ಕಲ್ಪಿಸಿದಂತಾಗುತ್ತಿರಲಿಲ್ವೆ? ಹೇಳಿ, ಹೇಳಿ ನೀವೇ ಹೇಳಿ....." ನೆರೆದಿದ್ದವರಲ್ಲಿ ಗುಸುಗುಸು ಪ್ರಾರಂಭ ಆಯ್ತು. ನಿಂಗಯ್ಯ, ನಾಗವ್ವ ಗರಬಡಿದವರಂತೆ ನಿಂತಿದ್ದರು. ದೇವರಾಜು ಒಮ್ಮೆ ಸುತ್ತಲೂ ಕಣ್ಣಾಯಿ

ಸಿದೊಡನೆ ಅವನನ್ನು ಕರೆಯುಲು ಹೋದಾಳು, ಅವನೊಡನಿದ್ದ ಚಿಕ್ಕ ಗುಂಪು "ಹೌದು ಹೌದು....." ಎಂದರಚತೊಡಗಿದೊಡನೆ ಎಲ್ಲೆಲ್ಲು ಅದೇ ಶಬ್ದವಾಯ್ತು. ಹಿರಿಯರೂ ಹೌದೆಂದು ತಲೆಯಾಡಿಸತೊಡಗಿದರು. ದೇವರಾಜು ಆವೇಶದಿಂದ, ಭಾವತುಂಬಿ ಚೀರಿಚೀರಿ ಹೇಳತೊಡಗಿದ "ಆ ಹೆಣ್ಣಿಗೆ ನ್ಯಾಯ ಒದಗಿಸಲು, ಬಾಳು ಕೊಡಲು ಪ್ರಚಾರ ಬೇಕಿಲ್ಲ...... ಹೋರಾಟದ ಅಗತ್ಯವಿಲ್ಲ...... ಸರ್ಕಾರ ಕೊಡುವ ಪರಿಹಾರದ ಪರಿವೆಯೇ ಬೇಡ...... ಆದರೆ...... ದೊಡ್ಡ ಮನಸ್ಸಿರ ಬೇಕು, ವಿಶಾಲವಾದ ಹೃದಯವಿರಬೇಕು ಜೀವನಪೂರ್ತಿ ಇವಳಿಗೆ ಆಧಾರವಾಗಿ, ನೆರಳಾಗಿ ಬದುಕುವೆ ಎನ್ನುವ ಆತ್ಮವಿಶ್ವಾಸ ಬೇಕು..... ಊರೇನೇ ಅನ್ನಲಿ ಯಾರೇನೇ ಕಿರುಚಲಿ ಎಲ್ಲವನ್ನೂ ತಿರಸ್ಕರಿಸಿ ನಡೆಯುವ ಗುಂಡಿಗೆ ಬೇಕು...." ಅಷ್ಟೆ ಎಲ್ಲೆಲ್ಲೂ ಜಯಕಾರ....... ಹರ್ಷೋದ್ಗಾರ......

ಲಕ್ಷ್ಮಿಗೆ ಸಂಬಂಧಿಸಿದ ಎಲ್ಲಾ ದಾಖಲೆಪತ್ರಗಳು ಹಾಗು ಕೆಲಸದ ಆರ್ಡರೊಂದಿಗೆ ನಾಲ್ಕು ದಿನಗಳ ನಂತರ ಊರಿಗೆ ಹಿಂದಿರುಗಿದ ಧರಣೆಪ್ಪನಿಗೆ ಕೇರಿಯಲ್ಲಿ ದೊಡ್ಡದಾಗಿ ಚಪ್ಪರ, ತಳಿರುತೋರಣಗಳು ಕಾಣಿಸಿದವು. ಇಡೀ ಕೇರಿ ನಿಂಗಯ್ಯನ ಮನೆಯತ್ತಿರ ನೆರೆದಿತ್ತು. ಅವನ ಮನೆಯ ಮುಂದಿದ್ದ ದೊಡ್ಡ ಪೆಂಡಾಲಿನಲ್ಲಿ ಆ ಕ್ಷೇತ್ರದ ಶಾಸಕರು, ತಾಲೂಕಿಗೆ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳು, ಮಹಿಳಾ ಸಂಘದ ಪದಾಧಿಕಾರಿಗಳು, ಪತ್ರಕರ್ತರು ಸೇರಿದ್ದರು. ಅವರೆಲ್ಲರ ನಡುವಲ್ಲಿ ಲಕ್ಷ್ಮಿ ದೇವರಾಜು ಮದುಮಕ್ಕಳಾಗಿ ಕಂಗೊಳಿಸುತ್ತಿದ್ದರು. ಯಾರೋ 'ಗಟ್ಟಿ ಮೇಳ.....' ಎಂದೊಡನೆ ಮೇಳ ಮೊಳಗಿತು. ಅದರೊಂದಿಗೆ ದೇವರಾಜು ಲಕ್ಷ್ಮಿಯ ಕೊರಳಿಗೆ ತಾಳಿ ಕಟ್ಟಿದ. ಆಗಲೇ ಬಂದ ಕುಲಕರ್ಣಿ ಧರಣೆಪ್ಪನ ಕೈಯಲ್ಲಿದ್ದ ಲಕೋಟೆಯನ್ನು ಇಸಿದು ದೇವರಾಜುನ ಕೈಗಿತ್ತು, ಅವನನ್ನು ಆಲಂಗಿಸಿಕೊಂಡ. ಎಲ್ಲೆಲ್ಲೂ ಮತ್ತೆ ಜಯಕಾರ..... ಮೇಳದ ಸದ್ದು, ಜಯಕಾರಗಳ ನಡುವೆ ಅಲ್ಲಿ ತುಂಬಿದ್ದ ಸಡಗರ, ಸಂಭ್ರಮದ ಮಧ್ಯೆ ಬೆಪ್ಪಾಗಿ, ಕಣ್ಣು ಬಿಟ್ಟುಕೊಂಡು ನಿಂತ ಧರಣೆಪ್ಪ, ಅವನ ಅಪ್ಪ ಅಮ್ಮ ಕರಗತೊಡಗಿದರು.

***

# ಆಸರೆ

"ಎಂತಹ ಪ್ರೀತಿಯವ್ವಾ ನಿಮ್ಮದು? ಎಷ್ಟು ಪ್ರೀತಿಸುತ್ತಾನವ್ವ ನಿನ್ನ?" ಅಪ್ಪಯ್ಯನ ಪ್ರಶ್ನೆಗೆ ಎದೆಯುಬ್ಬಿಸಿ, ಹೆಮ್ಮೆಯಿಂದ ಉತ್ತರಿಸಿದಳು ಮಗಳು ಗಂಗ. "ಆ ಪ್ರೀತಿ ಎಷ್ಟಂತ ಹೇಳ್ಲಪ್ಪಾ.......? ಹೆಂಗಂತ ಹೇಳ್ಲಿ........?" "ಹೇಳಲಾಗದಂತಹ ಪ್ರೀತಿಯೇನು ಅದು.......?" ತುಟಿಗಳಲ್ಲಿ ಹುಸಿನಗುವಿದ್ದರು ಮುಖದಲ್ಲಿ ಆಶ್ಚರ್ಯ ಸೂಸಿ ಕೇಳಿದ ಅಪ್ಪಯ್ಯ. ಆ ಮಾತಿಗೆ ತಾನೂ ಮುಖದಲ್ಲಿ ಹುಸಿಕೋಪ ತೋರಿ, ಮುಖ ತಿರುವಿ ಹೇಳಿದಳು ಗಂಗ "ಹಾಸ್ಯ ಮಾಡಬೇಡಪ್ಪ. ನಮ್ಮ ಪ್ರೀತಿ ಆ ಸೂರ್ಯನಿಗಿಂತಲೂ ಎತ್ತರವಾದ್ದು........ ಆದಕ್ಕಿಂತಲೂ ಪ್ರಕಾಶವಾದ್ದು......" ಅಪ್ಪಯ್ಯನ ಮುಖದಲ್ಲಿ ಕಂಡೂಕಾಣದಂತೆ ಚಿಂತೆಯ ಗೆರೆಗಳು ಮೂಡಿ ಮರೆಯಾದವು. ಗಂಗಳ ಲಕ್ಷ್ಯಕ್ಕದು ಬೀಳಲಿಲ್ಲ. ಆದರೂ ನಿಟ್ಟುಸಿರು ನಿಲ್ಲಲಿಲ್ಲ. ಮಗಳನ್ನು ಕೆಣಕುತ್ತ ಕೇಳಿದ "ಸೂರ್ಯನಿಗಿಂತಲೂ ಎತ್ತರವಾದ್ದು ಅಂದ್ರೆ ಕೈಗೆಟುಕ್ದಂತದ್ದು...... ಆದಕ್ಕಿಂತಲೂ ಪ್ರಕಾಶವಾದ್ದು ಅಂದ್ರೆ ಧಗಧಗನೆ ಹೊತ್ತಿ ಉರಿದುಹೋಗದಿಲ್ಲೇನೆ ಹುಡುಗಿ......?" ಅವನ ಮಾತಿಗೆ ಗಂಗಳಿಗೆ ನಗು ಬಂತು. ಅಪ್ಪಯ್ಯನಿಗೆ ಪ್ರೀತಿಸುವುದೊಂದೇ ಗೊತ್ತು. ಅದರ ಆಳ, ಎತ್ತರ ಬಗ್ಗೆ ಅರ್ಥವೇ ಆಗದು. "ಅಪ್ಪಾ....... ನನ್ನ ಮ್ಯಾಲೆ ನಿನಗೆ ಪ್ರೀತಿ ಇಲ್ಲೇನು.....?" ಮಗಳ ಮಾತಿಗೆ ಇದೆಯೆಂದು ತಲೆಹಾಕಿದ ಅಪ್ಪಯ್ಯ. "ಮತ್ತೆ ನೀನು ಒಳ್ಳೇನಲ್ಲೇನೂ......?" "ನೀನೇ ಹೇಳು......" ಅಪ್ಪಯ್ಯ ನಸುನಕ್ಕ. "ಹಾಗನ್ನು ಮತ್ತೆ. ಅಪ್ಪಯ್ಯ, ಅವ್ನು ನನ್ನ ಭಾಳ ಪ್ರೀತಿ ಮಾಡ್ತಾನೆ. ಕೊನೆತನ್ಕ ನಮ್ಮ ಜತೇಗೆ ಇರ್ತೀನಿ ಅಂತ ಒಪ್ಗಂಡಾನೆ....... ಅಲ್ಲ ಅಪ್ಪಯ್ಯ, ಅವ್ನು ನನ್ನ ಅಷ್ಟೊಂದು ಪ್ರೀತಿ ಮಾಡ್ತಾನಂದ್ರೆ ಅವ್ನು ಎಲ್ಲಾ ನಿನ್ನ ತರಹನೇ ಅಲ್ವಾ......?

ನಿನ್ನಂತಹ ಮನ್ಸು, ಹೃದಯ ಇರೋರ್ಗೆ ಮಾತ್ರ ಪ್ರೀತಿ ಮಾಡಕೆ ಬರೋದು...... ಅದಕ್ಕೆ, ನಾನು ಅವ್ನ ಪ್ರೀತಿಗೆ ಹೂಂ ಅಂದ್ಬಿಟ್ಟೆ. ತಪ್ಪಾಯ್ತೇನಪ್ಪಯ್ಯ....... ?" ಮಗಳ ಮುಗ್ಧತನಕ್ಕೆ, ತನ್ನ ಪ್ರೀತಿಯ ಮೇಲಿಟ್ಟಿರುವ ಅವಳ ನಂಬಿಕೆಗೆ ದಿಗಿಲಾಗಿ ಏನು ಉತ್ತರಿಸುವುದೆಂದು ತಿಳಿಯದೆ ಚಡಪಡಿಸಿದ ಅಪ್ಪಯ್ಯ.

ನೆಪಕ್ಕೆ ಬೆಂಗಳೂರಲ್ಲಿ ಕಾಲೇಜು ಮುಗಿಸಿದ ಸೂರಳ್ಳಿ ಸರದಾರ ಸಂಗಪ್ಪನ ಮಗ ಚೆಲುವರಾಜು, ಹಳ್ಳಿಗೆ ಹಿಂದಿರುಗವಲ್ಲಿ ಅವನ ಭವಿಷ್ಯ, ಅಪ್ಪನ ಆಪ್ತ ಸ್ನೇಹಿತ ಸೂರೇನಳ್ಳಿಯ ಎಕ್ಸೈಜು ಮಂತ್ರಿ ಕರಿಯಪ್ಪನ ಕೃಪಾಕಟಾಕ್ಷದಿಂದ ಸ್ಪಿರಿಟ್ ಫ್ಯಾಕ್ಟರಿಗೆ ಸಿಕ್ಕ ಪರ್ಮಿಟ್‌ನಲ್ಲಿ ಭದ್ರವಾಗಿತ್ತು. ಸೂರೇನಳ್ಳಿಯಿಂದ ಇನ್ನೂರು ಕಿ.ಮಿ. ದೂರವಿದ್ದ ವಿರಾಜಪಟ್ಟಣ ಫ್ಯಾಕ್ಟರಿಗೆ ಬಲು ಅನುಕೂಲವಾಗಿತ್ತು. ಅಲ್ಲಿಯೇ ಅಕ್ಕಪಕ್ಕ ಪ್ರಶಸ್ತವಾದ ಜಾಗದ ತಲಾಶ್‌ನಲ್ಲಿ ಅಪ್ಪ, ಮಗ ತೊಡಗಿದಾಗ ವಿರಾಜಪಟ್ಟಣದಿಂದ ಇಪ್ಪತ್ತು ಮೈಲಿ ದೂರವಿದ್ದು, ಐದು ಎಕರೆಯ ವಿಸ್ತಾರದಲ್ಲಿ ಮೈತಳೆದಿದ್ದ ಮಾವು, ಸೀಬೆ, ಸಪೋಟ, ಸೀತಾಫಲಗಳು ಕಂಡು ಬಂದವು. ಆ ಮಣ್ಣಿನ ಒಂದೊಂದು ಕಣದಲ್ಲೂ ಅದರ ಒಡೆಯನ ಒಂದೊಂದು ಕಣವೂ ಬೆರೆತು, ಬೆಸೆದು ಒಡಮೂಡಿದ್ದ ಆ ಸುಂದರ ತೋಟವೇ ಸ್ಪಿರಿಟ್ ಫ್ಯಾಕ್ಟರಿಗೆ ಪ್ರಶಸ್ತವಾದ ಜಾಗವೆಂದು ಸ್ಪಿರಿಟ್‌ನ ಸರದಾರರ ಹಿತೈಷಿಗಳು ಒಕ್ಕೊರಲಿನಿಂದ ಹೇಳಿದಾಗ ಕಲೆಗಾರನಾದ ಚೆಲುವರಾಜು ಆ ತೋಟದ ಒಡೆಯ ಮುತ್ತಯ್ಯನ ಏಕೈಕ ಕುವರಿ, ಸಹಜ ಸುಂದರಿ ಗಂಗಳ ಹಿಂದೆ ಮುಂದೆ ಸುತ್ತತೊಡಗಿದ್ದು, ಕಪಟವರಿಯದ ಮುಗ್ಧೆ ಗಂಗಳನ್ನು ಒಲಿಸಿಕೊಳ್ಳುವುದು ಚಿಟಿಕೆ ಹೊಡೆದಷ್ಟು ಸುಲಭವಾಯ್ತು. ಅತ್ತೆ ಕಮಲಮ್ಮನ ಊರಿನ ಜಾತ್ರೆಯಿಂದು ಬಯಲಿಗೆ ಬಂದ ಗಂಗಳ ಹಿಂದೆ, ಮುಂದೆ ನಿದ್ರಾಹಾರಗಳನ್ನು ತೊರೆದು, ಆಕೆಗಾಗಿ ಪ್ರಾಣ ಬಿಡುವವನ ಪೋಸಿನಲ್ಲಿ ಕಳೆಗೆಡತೊಡಗಿದಾಗ ಮೊದಲೇ ಭಾವಜೀವಿ ಗಂಗಾಳನ್ನು ಒಂದು ತೆರನ ಚಡಪಡಿಕೆ, ಕಾತರ, ಭಯ ಮುತ್ತುತ್ತಿರಲು, ಸಮಯ ನೋಡಿ ಅಸ್ತ್ರ ಪ್ರಯೋಗಿಸಿದ್ದ ಚೆಲುವರಾಜು. "ಗಂಗಾ....." ಎಂದು ಮೃದುಮಧುರವಾಗಿ ಕರೆದು, ಅಪ್ಪಯ್ಯನ ಹೊರತು ತನ್ನನ್ನು ಹೀಗೆ ಹೆಸರಿಡಿದು ವಾತ್ಸಲ್ಯದಿಂದ ಕರೆದ ಗಂಡಸು ಈತನೇ ಎಂದು ಸೋಜಿಗಪಡುತ್ತ ಕಣ್ಣರಳಿಸಿ ನಿಂತಿದ್ದವಳನ್ನು ಸಮೀಪಿಸಿ "ನನ್ಹೆಸರು ಚೆಲುವ. ನಮ್ಮೂರು ಸೂರಳ್ಳಿ. ನಿನ್ನತ್ರ ಮಾತಾಡ್ಬೇಕಂತ ಎಷ್ಟು ದಿನಗಳಿಂದ ಕಾಯ್ತಾ ಇದ್ದೀನಿ ಗೊತ್ತಾ...... ? ನಿನ್ನತ್ರ ಮಾತಾಡೋದು ಬಹಳ ಇದೆ. ಅದಕ್ಕೇ.... ಅದಕ್ಕೆ ಕೆರೆದಂಡೇಲಿರೋ ಮಲ್ಲಿಗೆ ಮಂಟಪದಾಗೆ ಕಾದಿರ್ತೀನಿ ಬರ್ತಿಯಾ..... ?" ಎಂದವನು ಅವಳ ಉತ್ತರಕ್ಕೂ ಕಾಯದೆ "ಬರದಿದ್ರೆ ನಾಳೆ ಕೆರೆಯಾಗೆ ನನ್ನ ಹೆಣ ತೇಲುತ್ತೆ ಅಷ್ಟೆ...." ಎಂದು ಅವಳ ಹೃದಯಕ್ಕೆ ನೆಡುವ ಬಾಣ ಒಗೆದು ನಡೆದುಬಿಟ್ಟ. ಸೂಕ್ಷ್ಮ ಮನಸ್ಸಿನ ಹೆಣ್ಣು ಸಣ್ಣಗೆ ನಡುಗಿತ್ತು. ಕಣ್ಣಾಲಿಗಳು ತುಂಬಿ ನಿಂತಿದ್ದವು. "ಅವ್ನಾಡೋದು ಸತ್ಯ ಕಣೇ....... ಕೆರ್‍ಯಾಗೆ ಮುಳ್ಗಿ ಸತ್ರೂ

ಸತ್ತೆ......." ಜೊತೆಗಾತಿಯರಂದರು. ಕಣ್ಣಂಚಿನ ನೀರು ಬಳಕ್ಕನೆ ಕೆನ್ನೆಯ ಮೇಲೆ ಉರುಳಿತು. "ನಾನು ಹೋಗ್ಬಿಟ್ರೆ ಅಪ್ಯಾಕೆ ಸಾಯ್ಬೇಕು....?" ತಡವರಿಸುತ್ತ ಬಂದ ಆ ಪ್ರಶ್ನೆಗೆ ಹಣೆಚಚ್ಚಿಗೊಂಡು, ಗೊಳ್ಳೆಂದ ಗೆಳತಿಯರು "ಅಯ್ಯೊ! ಯಾಕಂದ್ರೆ ಅಪ್ಪು ನಿನ್ನ ಪ್ರೀತಿ ಮಾಡ್ತನೆ ಅದಕ್ಕೆ......" ಎಂದರು. ಆ ಮಾತುಗಳೇ ಕಿವಿಯಲ್ಲಿ ಮೊಳಗಿ, ಅವಳನ್ನು ಹೊಸಲೋಕಕ್ಕೆ ಎಳೆದೊಯ್ದುವು. ಮಧುರ ಭಾವವೊಂದು ತನುಮನದಲ್ಲಿ ಹರಿದಾಡಿ ಅವಳನ್ನು ಮಲ್ಲಿಗೆ ಮಂಟಪದತ್ತ ಸೆಳೆದಿತ್ತು.

ಅಪ್ಪಯ್ಯನಿಗೆ ಮಗಳ ಮುಗ್ದತನದ ಅರಿವಿತ್ತು. ಆ ತೋಟ, ಗಂಗ ಅವನ ಎರಡು ಕಣ್ಣುಗಳು. ಮೃದುಮನಸ್ಸಿನ, ಭಾವಜೀವಿ ಗಂಗ ಮದುವೆಗೆ ಬೆಳೆದು ನಿಂತರೂ ಅವನ ತಟ್ಟೆಯಲ್ಲಿ ಉಣ್ಣುವುದನ್ನು, ಅವನ ಮಡಿಲಲ್ಲಿ ತಲೆಯಿಟ್ಟು ಮಲಗುವುದನ್ನು ಬಿಡಲಾಕೆ. ಅವನಿಗವಳು, ಅವಳಿಗವನು ಎಂಬಂತೆ ಇದ್ದರ ವರು. ಮಗಳ ಲಾಲನೆಪಾಲನೆಗೆ ಜೀವನವನ್ನೆ ಮೀಸಲಿಟ್ಟ ಅಪ್ಪಯ್ಯ ತಾಯಿ ಇಲ್ಲದಿದ್ದರೂ ಬೇಕೆನಿಸದಂತಹ ವಾತ್ಸಲ್ಯದ ಹೊಳೆಯನ್ನ ಹರಿಸುತ್ತಿದ್ದ. ಅವನ ಪ್ರೀತಿಯ ನೆರಳಲ್ಲಿ ಬೆಚ್ಚಗಿದ್ದವಳು ಗಂಗ. ಆಕೆ ಬಿಸಿಲಿಗೆ ಸ್ವಲ್ಪ ಬಳಲಿದರೂ, ಚಳಿಗಿಸಿತು ನಡುಗಿದರೂ ಕಂಗೆಡುವ ಅಪ್ಪಯ್ಯ, ಮಗಳ ತಲೆಯನ್ನು ಮಡಿಲ ಲ್ಲಿಟ್ಟುಕೊಂಡು, ಹಣೆಸವರುತ್ತ ಆರೈಕೆ ಮಾಡುವುದರಲ್ಲೇ ಜೀವನದ ಸಾರ್ಥಕತೆ ಪಡೆಯುವನು. ಅವಳ ಮುಖದ ಮೇಲಿನ ನಗುವೇ ಅವನಿಗೆ ಸಂಜೀವಿನಿ, ಅವನ ಪ್ರೀತಿಯೇ ಅವಳಿಗೆ ರಕ್ಷಾಕವಚ. ಇಂತಹ ಮಗಳಿಗೆ ತಕ್ಕನಾದ ವರ ಹುಡುಕುವುದೇ ಸಮಸ್ಯೆಯಾಗಿತ್ತು ಅವನಿಗೆ. ಸದಾ ನಗುತ್ತಲಿರುವ ಗಂಗ, ಮನಸ್ಸಿಗೆ ಸ್ವಲ್ಪ ಬೇಸರವಾದರೂ ಅವನ ಎದೆಗೊರಗಿ, ಅವನು ಅವಳ ತಲೆ ನೇವರಿಸುತ್ತಿದ್ದರೆ ಕಣ್ಮುಚ್ಚಿ ಎಲ್ಲಾ ಮರೆತು, ಮರುಕ್ಷಣ ಕಿಲಕಿಲ ನಗುವ ಹುಡುಗಿ. ಯಾರನ್ನೂ ದ್ವೇಷಿಸದ ಅವಳ ಕಡುವೈರಿ ಎಂದರೆ ಒಂಟಿತನ ಮಾತ್ರ. ಆದ್ದರಿಂದಲೇ ಹೆಜ್ಜೆಹೆಜ್ಜೆಗೂ ಅವಳಿಗೆ ಆಸರೆಯಾಗಿದ್ದವನು ಅವನು. ಮತ್ತೊಂದು ಅಂತದ್ದೆ ಆಸರೆ ಮಗಳಿಗೆ ಒದಗಿಸುವುದೇ ಅವನ ಜೀವನದ ಏಕೈಕ ಗುರಿಯಾಗಿತ್ತು. ಆದರೆ ಅವನ ನಿರೀಕ್ಷೆ, ಆಸೆಯೆಲ್ಲಾ ಹುಸಿಗೊಳಿಸಿ, ಅವನ ಹುಡುಕಾಟ ವ್ಯರ್ಥ ಎನಿಸುವಂತೆ ಚೆಲುವನ ವಿಷಯ ಗಂಗ ಅರುಹಿದಾಗ ಹೃದಯ ಒಡೆದರೂ ಅವಳಿಗೆ ಅನುಮಾನ ಬಾರದಂತೆ ತನ್ನ ಭಾವನೆಗಳನ್ನು ಅಡಗಿಸಿಕೊಂಡ ಅವನಿಗೆ ಮಗಳು ಮೆಚ್ಚಿದವನನ್ನು ತಿರಸ್ಕರಿಸುವ ಧೈರ್ಯವೂ ಇರಲಿಲ್ಲ.

ಒಂದು ಒಳ್ಳೆಯ ದಿನ ನೋಡಿ ಹೆಣ್ಣು ನೋಡುವ ಶಾಸ್ತ್ರ ಮಾಡಲು ಬಂದಿಳಿದರು ಚೆಲುವನ ಅಪ್ಪ, ಅವ್ವ. ನೆಪಕ್ಕೆ ಹೆಣ್ಣು ನೋಡಿದ ಶಾಸ್ತ್ರ ಮುಗಿದೊಡನೆ ಗಂಗಳನ್ನು ತೋಟಕ್ಕೆ ಕರೆದೊಯ್ದ ಚೆಲುವರಾಜು. ಅವರತ್ತ ಹೋಗುತ್ತಲೇ ಸಂಗಪ್ಪ "ಹೆಣ್ಣಿನ ಬಗ್ಗೆ ನಮ್ದೇನು ಚಕಾರ ಇಲ್ಲ. ಮುಂದಿನ

ವ್ಯವಹಾರ ಕುದುರ್ಸ್ತಾನ......" ಎಂದು ಮಾತಿಗೆ ತೊಡಗಿದ. ಅಪ್ಪಯ್ಯನಿಗೆ ಮಾತಾಡಲು ಅವಕಾಶವೇ ಕೊಡಲಿಲ್ಲ. ಅವಕಾಶ ಸಿಕ್ಕಾಗ ಮಾತಾಡುವ ಸ್ಥಿತಿಯಲ್ಲಿ ಅಪ್ಪಯ್ಯ ಇರಲಿಲ್ಲ. ಒಂದೇ ಮಾತಿನಲ್ಲಿ ಹೇಳಿಬಿಟ್ಟ ಸಂಗಪ್ಪ. "ನಮ್ಮ ಘನತೆ, ಅಂತಸ್ತಿಗೆ ತಕ್ಕಂತ ಹೆಣ್ಣುಗಳು ಬೇಕಾದಷ್ಟಿವೆ. ಆದ್ರೆ ನಮ್ಮುಡುಗ ನಿಮ್ಮುಡುಗೀನೆ ಬೇಕಂತಾನೆ. ಹುಡ್ಗಿ ವಿಚಾರ ಏನಾರ ಇರ್ಲಿ ಮನೆ ತುಂಬೋದಂತು ನಮ್ಮ ಘನತೆಗೆ ತಕ್ಕಂತಿರ್ಬೇಕು. ಹೆಚ್ಗೇನಿಲ್ಲ ಹುಡುಗನ್ಗೆ ಎರಡು ಲಕ್ಷ ಕ್ಯಾಶು, ಹುಡ್ಗಿಗೆ ಅರವತ್ತೊಲ ಬಂಗಾರ, ಇಪ್ಪತ್ತೊಲ ಬೆಳ್ಳಿ, ಮದ್ವೆ ಖರ್ಚು ಇಷ್ಟಾತು. ವ್ಯಾಲೆ ಹುಡಗನ್ಗೆ ಬಟ್ಟೆ, ಸೂಟು, ವಾಚು, ಉಂಗುರ, ಸರ ಇತ್ಯಾದಿ.... ಇತ್ಯಾದಿ....... ಈ ಶ್ರಾವಣಕ್ಕೆ ನಮ್ಮುಡಗನ ಮದ್ವೆ ಆಗೇ ತೀರ್ಬೇಕು. ನಿಮ್ಮುಡುಗಿ ಆದ್ರೂ ಸೈ ಬ್ಯಾರೆ ಆದ್ರೂ ಸೈ......" ಅಪ್ಪಯ್ಯ ತುಟಿಬಿಚ್ಚಲೇ ಇಲ್ಲ. ಅವನ ಮೌನ ಕಂಡು ತಾನೇ ಮಾತಾಡಿದ "ನೋಡ್ರಿ ಮುತ್ತಯ್ಯನೋರೆ, ನಿಮ್ಗೆ ಹಣ ಕೊಡಾಕೆ ತೊಂದ್ರೆ ಆತಂದ್ರೆ ತೋಟನ ನಮ್ಮುಡುಗನ ಹೆಸರಿಗೆ ಬರ್ದು ಬಿಡ್ರಿ. ಸಾಕ್ಕೋತ್ರಿ ನಾವೇನು ಕೇಳಲ್ಲ......" ದೂರದಲ್ಲಿ ಮಗಳು ಚೆಲುವರಾಜನ ಜತೆಗೆ ನಗುತ್ತಾ ಬರುತ್ತಿದ್ದಳು. ಮಗಳ ನಗು ಕಂಡಿದ್ದೆ ಅಪ್ಪಯ್ಯ ಸಂಗಪ್ಪ ಹೇಳಿದ್ದಕ್ಕೆಲ್ಲ ತಲೆಯಾಡಿಸಿಬಿಟ್ಟ. ಏನೊಂದು ಅರಿಯದ ಗಂಗಳಲ್ಲಿ ಮಾತ್ರ ಸಡಗರ, ಸಂಭ್ರಮದೊಂದಿಗೆ ನೂರಾರು ಬಯಕೆಗಳು ತುಂಬಿನಿಂತವು. ಆದರೆ ಒಂದೇ ತಿಂಗಳಿಗೆ ಹೆಂಡತಿಯನ್ನು ತನ್ನೂರಿಗೆ ಹೊರಡಿಸಿದ ಚೆಲುವರಾಜು. ಅಪ್ಪಯ್ಯ ಅಳಲೂ ಇಲ್ಲ, ನಗಲೂ ಇಲ್ಲ. ನೋವು, ನಲಿವು ಏನೊಂದು ಪ್ರಕಟಿಸದೆ ನಿರ್ಲಿಪ್ತನಂತಿದ್ದ. ತನ್ನ ಕೊರಳನ್ನು ತಬ್ಬಿ ಬಿಕ್ಕುತ್ತಿದ್ದ ಗಂಗಳ ತಲೆಯನ್ನೂ ನೇವರಿಸದಾದ. ಆದರೆ ಆಕೆ ಹೊರಟು ಹೋದೊಡನೆ ಮಂಕಾಗಿ, ಸೊರಗುತ್ತ ಹಾಸಿಗೆಯಿಡಿದ ಅಪ್ಪಯ್ಯ. ಮಾವನನ್ನು ತಣ್ಣಗಾಗಿಸಲು ಸುಲಭ ವಿಧಾನ ತಂದೆ, ಮಗಳ ಅಗಲಿಕೆ ಎಂದು ಮನದಟ್ಟಾದ ಮರು ಗಳಿಗೆ ಒಂದೇ ಹಿಂಸೆಯಿಂದ ಅವಳನ್ನು ತನ್ನೂರಿಗೆ ಹೊರಡಿಸಿಬಿಟ್ಟ ಚೆಲುವರಾಜು. ಗಂಗಳಿಲ್ಲದ ಮನೆ, ತೋಟ ಮಸಣವಾಗಿ ಅಪ್ಪಯ್ಯ ಹಾಸಿಗೆ ಸೇರಿದರೆ, ಅವರಿಬ್ಬರ ಉಸಿರಾದ, ಕೇಳುವವರೇ ದಿಕ್ಕಿಲ್ಲದಂತಾದ ಮರಗಳು ಒಂದೊಂದಾಗಿ ಬುಡಸಮೇತ ಕಳಚಿ ಕೊಳ್ಳತೊಡಗಿದವು. ಅತ್ತ ಗಂಗಳದೂ ಅದೇ ಪಾಡು. ಗಂಗ ತನ್ನ ಮನೆಹೊಕ್ಕ ಕ್ಷಣದಿಂದಲೇ ತನ್ನ ನಿಜರೂಪ ತೋರುತ್ತ, ಅವಳಿಗೆ ಅಪರೂಪನಾಗಿ ಹೋದ ಚೆಲುವರಾಜು. ಮನೆ ತುಂಬ ಜನರಿದ್ದೂ ಆಕೆ ಒಂಟಿ. ಅವಳೆಂದೂ ನೋಡದ ದರ್ಪ, ದಬ್ಬಾಳಿಕೆ; ಎಂದೂ ಅನುಭವಿಸದ ಒಂಟಿತನ ಒಳಗೊಳಗೆ ಆಕೆಯನ್ನು ಸವೆಸತೊಡಗಿದವು. ದೊಡ್ಡ ಮನೆಯ ಮಹಡಿ ಮೇಲಿನ ಒಂಟಿ ಕೋಣೆಯ ನೀರವತೆ ಭೂತವಾಗಿ ಮೇಲೆರಗಿದಂತೆ ಭಾಸವಾಗಿ ರಾತ್ರಿ ಮುದುರಿ ಕೂತು, ಜೀವ ಬಿಗಿಹಿಡಿದು ಭಯದಿಂದ ತತ್ತರಿಸುತ್ತ, ಬೆಚ್ಚುತ್ತ "ಅಪ್ಪಯ್ಯ....... ಅಪ್ಪಯ್ಯ......." ಎಂದು ಕನವರಿಸತೊಡಗಿದಳು. 'ಯಾರ್ದೊ ಕಣ್ಣು ಬಿದ್ದೈತೆ' ಎಂದು ಪೊರಕೆಯಿಂದ ನೀವಾಳಿಸಿದರು ಮೊದಮೊದಲು ಮನೆಯವರು.

ಆನಂತರ ಯಾರೋ ಮಾಟ ಮಾಡಿಸಿರಬೇಕೆಂದು ಕಟ್ಟು ಮಾಡಿಸುತ್ತ, ಗಾಳಿ ಮೆಟ್ಟಿರಬಹುದೆಂದು ಮಾಂತ್ರಿಕನನ್ನು ಕರೆಸುತ್ತ ಅವರ ಕಾಳಜಿ ಹೆಚ್ಚಾದಂತೆ ಗಂಗ ಪೂರ್ತಿ ಮಂಕಾದಳು. ಕೊನೆಗೆ ಊರಿನ ಜನರೆಲ್ಲ "ಸೂರೇನಳ್ಳಿ ಸರದಾರ ಸಂಗಪ್ಪನ ಸೊಸೆಗೆ ತಲೆ ಸರಿಯಿಲ್ಲ......" ಎಂದು ಮಾತಾಡಿಕೊಳ್ಳುವ ಹೊತ್ತಿಗೆ ತೋಟದಲ್ಲಿ ಫ್ಯಾಕ್ಟರಿಯ ಕಟ್ಟಡ ಭವ್ಯವಾಗಿ ತಲೆಯೆತ್ತಿತ್ತು. ಪ್ರಾರಂಭೋತ್ಸವ ಇನ್ನೊಂದು ವಾರವಿದೆ ಎನ್ನುವಾಗ ಸಂಗಪ್ಪ ಸೊಸೆಯನ್ನು ತಂಗಿಯು ಊರು ಸೇರಿದ್ದ ಅಪ್ಪಯ್ಯನ ಬಳಿಗೆ ಕರೆದೊಯ್ದು, ಜನ ಸೇರುವಂತೆ ಗದ್ದಲವೆಬ್ಬಿಸಿ "ನಿನ್ ಮಗ್ಳಿಗೆ ತಲೆಸರಿಯಿಲ್ಲಾಂದ್ರೆ ಯಾವ್ದಾನ ಹುಚ್ಚಾಸ್ಪತ್ರೆಗೆ ಸೇರಿಸ್ಬೇಕಯ್ಯ...... ಅದ್ಬಿಟ್ಟು ಒಳ್ಳೆ ಅಮಾಯಕ ಹುಡುಗ್ರಿಂದೆ ಬಿಡ್ತಾರ್ದು...... ತಲೆಸರಿಯಿಲ್ದ ಈ ಪ್ರಾರಬ್ಧ ಕಟ್ಕಂಡು, ನನ್ನ ಮಗನ ಜೀವ್ನ ಹಾಳಾಗೋಯ್ತು......" ಎಂದು ಗಂಗಳನ್ನು ಅಲ್ಲಿಯೇ ಬಿಟ್ಟು ಹೊರಟುಬಿಟ್ಟ. ಅಪ್ಪಯ್ಯ ಗರಬಡಿದವನಂತೆ ಕೂತಿದ್ದರೆ, ತಂಗಿ ಕಮಲವ್ವ ಎದೆಬಡಿದುಕೊಳ್ಳತೊಡಗಿದಳು. ಮನೆಯ ಹೊರ ಗಿನ ವಿದ್ಯಮಾನಗಳೊಂದು ಅರಿಯದ ಗಂಗಳ ಎದೆ ಪ್ರಸ್ತುತ ಪರಿಸ್ಥಿತಿಯ ಗಂಭೀರತೆಗೆ ಬೆಚ್ಚಿ ನಡುಗಿತು. ಅಪ್ಪಯ್ಯ ತೋಟ ಯಾಕೆ ತೊರೆದನೆಂಬ ಸತ್ಯವು ತೆರೆದುಕೊಳ್ಳುತ್ತಿದ್ದಂತೆ ಪ್ರೀತಿಯ ಮರೆಯಲ್ಲಿನ ವಂಚನೆ ನಿಚ್ಚಳವಾಗಿ ಗಂಗಳ ಹೃದಯ ನೋವಿನಿಂದ ವಿಲವಿಲನೆ ಒದ್ದಾಡಿತು.

ಅಪ್ಪಯ್ಯ ಪೂರ್ತಿ ಹಾಸಿಗೆ ಹಿಡಿದು, ಅವನ ಸ್ಥಿತಿ ಚಿಂತಾಜನಕವಾಗಿತ್ತು. ಮೂರು ದಿನಗಳ ನಂತರ ಕಣ್ತೆರೆದು, ಸ್ವಲ್ಪ ಸುಧಾರಿಸಿದಂತೆ ಕಂಡ. "ನೀನಾಡಿದ ಮಾತು ಸತ್ಯ ಅಪ್ಪಯ್ಯ. ಕೈಗೆ ಎಟುಕದ್ದಕ್ಕೆ ಆಸೆಪಟ್ಟು, ನನ್ನ ಜತೇಲಿ ನಿನ್ನನ್ನೂ ಆ ಉರಿಯುವ ಬೆಂಕಿಗೆ ತಳ್ಳಿಬಿಟ್ಟೆ. ನಾನು ತಪ್ಮಾಡಿದೆ ಅಪ್ಪಯ್ಯ....... ನಾನು ತಪ್ಮಾಡಿಬಿಟ್ಟೆ......" ಗಂಗ ಗದ್ಗದಿತಳಾಗಿ ನುಡಿದಳು ಅಪ್ಪಯ್ಯನ ಕೈ ಹಿಡಿದು. ಹೆಚ್ಚು ಮಾತನಾಡಲು ಶಕ್ಯನಿಲ್ಲದ ಅಪ್ಪಯ್ಯ ಮಗಳನ್ನು ಹತ್ತಿರಕ್ಕೆ ಕರೆದುಕೊಳ್ಳುತ್ತ, ಅವಳನ್ನೊಮ್ಮೆ ಪ್ರೀತಿಯಿಂದ ತಡವಿ, ಪಕ್ಕದಲ್ಲಿದ್ದ ತಂಗಿಯ ಮಗ ಸಿದ್ದನಿಗೆ ಕಣ್ಸನ್ನೆ ಮಾಡಿ, ತೊದಲುತ್ತ ನುಡಿದ. "ತಪ್ಪು ನಿಂದಲ್ಲವ್ವ ನಂದು....... ನಿನ್ನ ಪ್ರಪಂಚ ನಮ್ಮಿಬ್ಬರ ನಡುವೆ, ಆ ಮರಗಳ ನಡುವೆ ಮಾತ್ರ ಇತ್ತು. ಅದಕ್ಕಿಂತ ಹೊರಗಿನ ವಿಶಾಲವಾದ ಪ್ರಪಂಚದ ಸತ್ಯದರ್ಶನ ನಾ ನಿನಗೆ ಮಾಡಿಸಲೇ ಇಲ್ಲ. ಇವತ್ತಿನ ನಿನ್ನ ಸ್ಥಿತಿಗೆ ಕಾರಣ ಅದೇ......." ಗಂಗ ಅಪ್ಪಯ್ಯನ ಎದೆಯ ಮೇಲೊರಗಿ ಬಿಕ್ಕಿದಳು. "ಗಂಗಾ......!" ನೋವು ವಾತ್ಸಲ್ಯ ಮೇಳೈಸಿ ಬಂತು ಕರೆ. "ಈಗ ಸದ್ಯಕ್ಕೆ ನಂದು ಅಂತಿರೋದು ಇವು ಮಾತ್ರ. ಆ ಜಾಗಕ್ಕೆ ನೀನು ಮತ್ತೆ ಕಾಲಿಡಬೇಡ, ಅವರನ್ನ ಕೇಳಲೂ ಬೇಡ. ಇದೋ ಈ ಮಾವಿನ ಸಸಿಗಳೇ ಇನ್ಮುಂದೆ ನಿನಗೆ ಆಸರೆ. ನಿನ್ನ ಹೊಟ್ಟೇಲಿ ಹುಟ್ಟಿದ ಮಕ್ಕಳಿವು. ರಕ್ತ ಮಾಂಸ ಇರುವ ಮಕ್ಕಳಾದ್ರು ಎದೆಗೊದ್ದು ಹೋದಾರು ಆದ್ರೆ, ಇವು ಎಂದೂ ನಿನ್ನ ಕೈ ಬಿಡಲಾರ್ವು. ಮೋಸವಂಚನೆ ಒಂದೂ ಅರೀದ ನಿನ್ನಂತೆ ಮುಗ್ಧಜೀವರು.

ಒಬ್ಬ ಮನುಷ್ಯ ಜೀವನದಲ್ಲಿ ಅನುಭವಿಸಬೇಕಾದ್ದನ್ನೆಲ್ಲ ನೀನು ಈ ನಾಲ್ಕು ತಿಂಗಳಲ್ಲಿ ಅನುಭವಿಸಿದ್ದಿ. ಅಷ್ಟಕ್ಕೆ ಈ ಎಲ್ಲಾ ಬಡಿದಾಟ. ನೀನು ಅದೆಲ್ಲ ಮೀರಿ ನಿಲ್ಲು. ಈ ಸಸಿಗಳು ಮರವಾಗಿ ನಿನ್ನೆಂದೂ ಕೈ ಬಿಡಲಾರವು. ಅವುಗಳ ಪ್ರೀತಿ, ಒಡನಾಟ ಎಲ್ಲಾ ಮನುಷ್ಯರ ಒಡನಾಟಕ್ಕು ಮೀರಿ ನಿಂತಿದ್ದು......" ಅಪ್ಪಯ್ಯ ಮಾತಾಡುತ್ತಿದ್ದಂತೆ ಗಂಗ ಸಿದ್ಧನ ತೆಕ್ಕೆಯಲ್ಲಿದ್ದ ಸಸಿಗಳನ್ನು ತನ್ನ ಕೈಗೆ ತೆಗೆದು ಕೊಂಡು, ಬಲು ಜತನದಿಂದ ಅವುಗಳನ್ನು ತಬ್ಬಿಕೊಂಡು, ಎದೆಗೊತ್ತಿಕೊಂಡಳು. ಕಣ್ಮುಚ್ಚಿ ಮೈ ಮರೆತಳು. ಆ ಕ್ಷಣ ಸಮಾಧಾನದ ನಿಟ್ಟುಸಿರಿನೊಡನೆ ಅಪ್ಪಯ್ಯನ ಮೈಮನ ಶಾಂತಗೊಂಡವು. ಮರುದಿನವೇ ಫ್ಯಾಕ್ಟರಿಯ ಪ್ರಾರಂಭೋತ್ಸವ. "ಮುದುಕ ಈಗಲೇ ಸಾಯಬೇಕಿತ್ತೆ......?" ಎಂದು ಗೊಣಗುಟ್ಟುತ್ತಲೇ ಬಂದಿಳಿದರು. ಗಂಗಳ ಮುಂದೊಂದು ನೋಟಿನ ಕಂತಿಟ್ಟು, ಕಮಲಮ್ಮನ ಕುರಿತು "ಮುತ್ತಯ್ಯ ಹೀಗೆ ಇದಕ್ಕಿದ್ದಂಗೆ ಸತ್ತು ಗಂಗನ್ನ ಒಂಟಿ ಮಾಡ್ತನಂತ ಯಾರು ತಿಳ್ದಿದ್ರು ಹೇಳು.......? ಏನೋ ಎಲ್ಲಾ ಕೆಟ್ಟ ಘಳಿಗೆ...... ಗಂಗ, ಇನ್ಮುಂದೆ ನಿನ್ಗೆ ತಿಂಗ್ಳಾ ಇಷ್ಟಂತ ದುಡ್ಡು ಕಳಿಸಿಕೊಡ್ತೀನಿ...... ನೀನು ಯಾವ್ದಕ್ಕೂ ಯೋಚ್ನೆ ಮಾಡ್ಬೇಡ....." ಸಂಗಪ್ಪನೇ ಮಾತಾಡುತ್ತಿದ್ದ. ಚೆಲುವರಾಜು, ಅವನ ಅವ್ವ ಸುಮ್ಮನೆ ತಲೆಬಗ್ಗಿಸಿ ಕೂತಿದ್ದ ಗಂಗಳನ್ನೇ ನೋಡುತ್ತಿದ್ದರು. ಮೇಲ್ನೋಟಕ್ಕೆ ಶಾಂತಳಾಗೇ ಕಂಡರೂ ಒಳಗೆ ಕುದಿಯುತ್ತಿದ್ದಳು ಗಂಗ. ಆದರೆ ಸಂಗಪ್ಪ ದುಡ್ಡಿನ ವಿಷಯ ಮಾತಾಡಿದೊಡನೆ ಕೆರಳಿದಳು. "ಮೊದ್ಲು ಈ ದುಡ್ಡು ಎತ್ಕೊಳ್ರಿ ನೀವು. ಯಾರ ಹಂಗೂ, ಅನುಕಂಪನೂ ಬೇಡ ನನ್ಗೆ. ತಲೆಹಿಡುಕರ ದುಡ್ನಗೆ ಕಾಲಹಾಕೋಂತ ಕೇಡುಗಾಲ ನನಗೇನು ಬಂದಿಲ್ಲ..." ಹರಿತವಾಗಿದ್ದವು ಮಾತುಗಳು. ಅಪ್ಪ, ಮಗ ಒಟ್ಟಿಗೇ ಮೆಟ್ಟಿಬಿದ್ದರು. "ಏಯ್ ಯಾರ್ಗೆ ನೀನಂದಿದ್ದು......?" ಚೆಲುವರಾಜು ಹಲ್ಲುಕಡಿದ. "ಹಲ್ಯಾಕೆ ಕಡೀತಿಯೊ.....? ನಿಮ್ಮಪ್ಪನಿಗೆ, ನಿನ್ಗೆ ಅಂದಿದ್ದು. ಬೆಳ್ದು, ಫಲಕೊಟ್ಟು, ನಮ್ಗೆ ಅನ್ನ ಕೊಡ್ತಿದ್ದ ಮರಗಳ್ನ ಕೆಡವಿರೋ ನಿಮ್ಮ ಕೆಲ್ಸ ನೀನೇ ನಿಮ್ಮವ್ವನ ಮ್ಯಾಲೆ ಅತ್ಯಾಚಾರ ಮಾಡ್ದಂಗೈತೆ......" ಗಂಗಳ ಮಾತು ಮೂವರ ಮರ್ಮಕ್ಕೆ ನಾಟಿ, ಅವಳ ಅತ್ತೆ ಕಿವಿಮುಚ್ಚಿ "ಸಿವಾಸಿವಾ....." ಎಂದು ಕೆಳಕ್ಕೆ ಕುಸಿದು ಕುಳಿತಳು. ಚೆಲುವರಾಜು ಗಂಗಳ ಮೇಲೇರಿಹೋದ. ಗಂಗ ತಟಕ್ಕನೆ ಪಕ್ಕದಲ್ಲಿದ್ದ ಚಪ್ಪಲಿಯನ್ನು ಎತ್ತಿಕೊಂಡು ಚಂಡಿಯಾಗಿ ನಿಂತಳು. ಅವಳ ಅವತಾರ ಕಂಡು ದೂರ ಸರಿದನವ. "ಲೋ ನಮ್ಮಪ್ಪ ಸತ್ತಿಲ್ಲೊ...... ನಾನು ಒಂಟಿಯೂ ಅಲ್ಲ. ಆ ಮರಗಳು ಬರೀ ಮರಗಳಲ್ಲೊ...... ನಮ್ಮಪ್ಪಯ್ಯನ ಪ್ರಾಣ; ಆ ಮಣ್ಣು ಬರೀ ಮಣ್ಣಲ್ಲ ಅದು ಅಪ್ಪಯ್ಯನ ರಕ್ತಮಾಂಸ........ ಅಲ್ಲಿ ಬೀಸ್ತಿರೋ ಗಾಳಿ ಬರೀ ಗಾಳಿಯಲ್ಲ ಅಪ್ಪಯ್ಯನ ಉಸಿರದು. ಆ ಮಣ್ಣಿನ ಕಣಕಣದಾಗೂ ಅಪ್ಪಯ್ಯನ ಆತ್ಮ ಐತೆ...... ಅಲ್ಲಿ ನೀವು ಉದ್ಧಾರಾಗ್ತೀರೇನೊ.....? ಹೋಗ್ರೊ........ ಅದೆಂಗೆ ಉದ್ಧಾರಾಗ್ತಿರಿ ಆಗೋಗ್ರೊ......" ಗಂಗಳ ಬಾಯಿ ಜೋರಾಗುತ್ತಲೇ ಇತ್ತು. ಮೂವರು ಬೆವತು ಒಳಗೇ ನಡುಗುತ್ತಿದ್ದರು. ನೆರೆದ ಜನರೆದುರು ಮರ್ಯಾದೆಯೂ ಹೋಗುತ್ತಿತ್ತು.

ಅದನ್ನು ಉಳಿಸಿಕೊಳ್ಳಲು ಚೆಲುವರಾಜು ಬಾಯ್ಬಿಟ್ಟ. "ಪಾಪ! ಏನೋ ದುಃಖವಾಗಿದಾಳೆ...... ಸಾಧ್ಯವಾದ್ರೆ ಕರ್ಕಂಡೋಗಣ ಅಂತ ಬಂದ್ರೆ ಇವ್ಳ ಹುಚ್ಚು ವಿಪರೀತಕ್ಕೆ ತಿರುಗೈತೆ......" ಪಠ್ರನೆ ಕತ್ತಿನಲ್ಲಿದ್ದ ತಾಳಿಸರವನ್ನು ಕಿತ್ತು ಸೀದಾ ಚೆಲುವರಾಜನ ಮುಖಕ್ಕೆ ಒಗೆದು "ನನ್ನ ನೀನು ಸಾಕ್ತಿಯೇನೋ ಹೇಡಿ......! ನಿನ್ನ ಕೂಳಿಗೇ ಇನ್ನೊಬ್ರ ಕುತ್ತಿಗೆ ಕುಯ್ದು ಬದುಕಾಕೆ ಪರದಾಡ್ತಿರೋ ನಿನ್ನಂತಹ ನರಸತ್ತೋನ್ ಜತಿಗೆ ನಾ ಬರ್‍ತಿನೇನೊ....... ಥೂ......!" ಎಂದು ಉಗುಳಿ "ನೀನು, ನಿಮ್ಮಪ್ಪ ನನ್ನ ಋಣದಲ್ಲಿ ಇದ್ರೂ, ನನ್ನ ಋಣದಲ್ಲೆ ಸಾಯ್ಬೇಕು ನಿಮ್ಮಿಬ್ಬರಿಗೆ ಮುಕ್ತಿನೇ ಇಲ್ಲ ಹೋಗ್ರಲೇ........" ಎಂದು ತನ್ನ ಮುಂದಿದ್ದ ನೋಟಿನ ಕಂತೆಯನ್ನೂ ಎತ್ತಿ ಅವರತ್ತ ಬಿಸಾಡಿದಳು. ಅಷ್ಟರಲ್ಲಿ ಸಿದ್ಧ ಸಸಿಗಳನ್ನು ಹೊತ್ತು, ಕೈಯಲ್ಲಿ ಸಲಿಕೆ, ಗುದ್ದಲಿ ಹಿಡಿದು ಬಂದ. ಆ ಕ್ಷಣ ಗಂಗ ಒಮ್ಮೆಗೆ ತಣ್ಣಗಾಗಿ, ಎಂದಿನ ಸೌಮ್ಯ ರೂಪತಾಳಿ, ಆ ಸಸಿಗಳನ್ನು ಎತ್ತಿಕೊಳ್ಳುತ್ತ ಶಾಂತಳಾಗಿ ಬಿಳಚಿಕೊಂಡು ನಿಂತಿದ್ದ ಮೂವರಿಗೂ ಹೇಳಿದಳು "ಇನ್ನು ಮುಂದೆ ಈ ಗಿಡಗಳೇ ನನಗೆ ಎಲ್ಲಾ..... ಇವೇ ನನ್ನ ಬಂಧು ಬಳಗ. ಇನ್ನೆಂದೂ ನನ್ಮೇಲೆ ಕರುಣೆ ತೋರ್‍ಸ್ನಾ ನಾಟ್ಕ ಆಡ್ಕಂಡು ಬರ್‍ಬೇಡ್ರಿ. ನಾನು ಅಷ್ಟೆ ನಿಮ್ಮ ತಂಟೆಗೆ ಬರಲ್ಲ. ಇನ್ನು ನನ್ ಪಾಡು ನನ್ಗೆ. ನಿಮ್ ಪಾಡು ನಿಮ್ಗೆ. ಬಿಡಿಗಾಸು ಅಲ್ಲ ನಿಮ್ಮ ಸಹವಾಸವೇ ಬೇಡ ನನ್ಗೆ. ನನ್ನ ಮುಂದಲ ಬದುಕು, ಬಾಳುವೆ ಈ ಗಿಡಗಳ ಜತೆಗೆ, ನಾಳೆ ಬೆಳೆಯೋ ಮರಗಳ ಜತೆಗೆ ಸೇರಿ ಹಂಚಿಹೋಗೈತೆ. ಅಪ್ಪಯ್ಯ ನನ್ನ ಕೈಗೆ ಒಪ್ಸಿ ಹೋಗಿರೋ ಅವನ ಕಂದಮ್ಮಗಳೇ ಇವು. ಇನ್ಮುಂದುಕ್ಕೂ ಇವೇ ನನ್ಗೆ ಆಸರೆ. ನೀವು ಮಾತ್ರ ಧೈರ್ಯವಾಗಿ ಹೋಗ್ರಿ ನನ್ನಿಂದ ನಿಮ್ಗೆ ಯಾವ ಕಷ್ಟನಷ್ಟವೂ ಇಲ್ಲ......." ಅವರು ಮೂವರಿನ್ನೂ ಬೆಪ್ಪರಂತೆ ನಿಂತೇ ಇದ್ದಾಗಲೇ ಸಿದ್ಧನ ಹಿಂದೆ ಅಪ್ಪಯ್ಯ ಸಾಯುವ ಮೊದಲು ತಂಗಿಯು ಹತ್ತಿರಕೊಂಡು, ಇದೀಗ ತಾನು ಅಲ್ಲೇ ಸಮಾಧಿಯಾಗಿದ್ದ ಒಂದೆಕರೆಯ ಭೂಮಿಯ ಕಡೆಗೆ ಹೆಜ್ಜೆ ಹಾಕಿದಳು ಗಂಗ.

***

# ತಾಯ್ತನ

ಆಟೋ ಇಳಿದು ದುಡ್ಡು ಕೊಡಲು ಪರ್ಸ್ ಬಿಡಿಸುತ್ತಿದ್ದಳು ಪೃಥ್ವಿ. ಅಲ್ಲಿಗೆ ಕೇಳಿಬಂತು ಪಾಪುವಿನ ಅಳು. ಆತುರಾತುರವಾಗಿ ಚಾಲಕನ ಕೈಯಲ್ಲಿ ದುಡ್ಡನ್ನು ತುರುಕಿ ಒಳಗೋಡಿದಳು. ಅಮ್ಮನನ್ನು ನೋಡಿ ತನ್ನೆರಡು ಕೈಗಳನ್ನು ಆಕೆಯತ್ತ ಚಾಚುತ್ತಾ ಅಳುವನ್ನು ಮತ್ತೂ ಜೋರು ಮಾಡಿದ ಪಾಪು, ಅವನನ್ನು ರಮಿಸುತ್ತಾ ಮುದಗರೆಯುತ್ತಾ ರೂಮಿನೊಳಕ್ಕೆ ಹೋದಳು. ಪಕ್ಕದಲ್ಲಿ ಮಲಗಿಸಿಕೊಂಡು ಹಾಲು ಕುಡಿಸುತ್ತಾ ಅವನ ಮುಖವನ್ನೇ ದಿಟ್ಟಿಸಿದಳು. ಇದುವರೆಗೆ ನೆಲಸಿದ್ದ ದುಃಖ ದುಮ್ಮಾನ ಮಾಯವಾಗಿ ಅಲ್ಲಿ ಸಂತಸ ತುಂಬಿತ್ತು. ಅವಳ ಬಾಯಿಯಿಂದ ನಿಟ್ಟುಸಿರೊಂದು ಹೊರಟಿತು.

ಅಪಘಾತಕ್ಕೀಡಾಗಿ ಕೈಕಾಲು ಮುರಿದುಕೊಂಡು ಆಸ್ಪತ್ರೆಯಲ್ಲಿ ಬಿದ್ದಿದ್ದ ಅಪ್ಪನನ್ನು ನೋಡಲು ಹೋಗಿದ್ದಳು. ಆಗ ಈಗ ಎನ್ನುತ್ತಿದ್ದ ಅವನನ್ನು ನೋಡಿಯೂ ಮನಸ್ಸು ಮರುಗಲಿಲ್ಲ. ಅವನ ನರಳಾಟ ಕೇಳಿದಾಗಲೆಲ್ಲಾ ಕಣ್ಣೀರು ತುಂಬಿದ್ದ ಅಮ್ಮನ ಮುಖ ಎದುರಿಗೆ ಬಂದು ನಿಲ್ಲುತ್ತಿತ್ತು. ಅಮ್ಮ ಬದುಕಿರುವವರೆಗೂ ಅವಳನ್ನು ಕಣ್ಣೀರಲ್ಲೇ ಮುಳುಗಿಸಿದ್ದ "ನರಳೂ..... ನೀನು ನರಳಿ ನರಳಿಯೇ ಸಾಯಬೇಕು. ಅಮ್ಮ ದಿನವಿಡಿ ಸುರಿಸುತ್ತಿದ್ದ ಕಣ್ಣೀರೆ ಈ ನಿನ್ನ ನರಳಿಕೆ...... ನಿನ್ನ ಕ್ರೌರ್ಯಕ್ಕೆ ಒಳಗಾಗಿ ಆಕೆಯ ಬಾಯಿಂದ ಹೊರಡುತ್ತಿದ್ದ ಆಕ್ರಂದನವೇ ನಿನ್ನ ಈ ಚೀರಾಟ, ಕೂಗಾಟ. ನೀನು ಬೇಗನೆ ಸಾಯಕೂಡದು...... ಪಾಪದ ಫಲವನ್ನೆಲ್ಲಾ ತೀರಿಸಿಯೇ ಸಾಯಬೇಕು...." ಮನಸ್ಸು ಚೀರುತ್ತಿತ್ತು. ಕೇವಲ ನೀನೊಬ್ಬ ಗಂಡಸು ಎಂಬ ಕಾರಣಕ್ಕೆ ನನ್ನ ಅಮ್ಮನನ್ನು ಕೀಳಾಗಿ ಕಾಣುತ್ತಿದ್ದೆಯಲ್ಲಾ........ ಅವಳ ಕೋಮಲವಾದ ದೇಹದ ಮೇಲೆ ನಿನ್ನ ಪೌರುಷದ

ಪ್ರದರ್ಶನ ನಡೆಸುತ್ತಿದ್ದೆಯಲ್ಲಾ..... ಅವಳನ್ನು ಹೆತ್ತವರ ಬಡತನವನ್ನು ಹೀಯಾಳಿಸಿ ನಗುತ್ತಿದ್ದೆಯಲ್ಲಾ...... ಕೈ ಹಿಡಿಯುವವನ ಬಗ್ಗೆ ನೂರಾರು ಕನಸು ಹೆಣೆದು, ಆಶಾಗೋಪುರವನ್ನು ಕಟ್ಟಿ ನಿನ್ನ ಜೀವನದ ಸಂಗಾತಿಯಾಗಲು, ನಿನ್ನ ಸಹಧರ್ಮಿಣಿಯಾಗಲು ಬಂದ ಅವಳನ್ನು ಕ್ಷಣಕ್ಷಣವೂ ಅಪಮಾನಿಸಿ, ತುಚ್ಛೀಕರಿಸಿ ನಿನ್ನ ಕಾಲಕಸವನ್ನಾಗಿ ಮಾಡಿಕೊಂಡೆಯಲ್ಲಾ..... ಅಯ್ಯೋ, ಅಯ್ಯೋ ಅವರ ಮೇಲೆ ನನ್ನಮ್ಮನ ಮೇಲೆ...... ನೀನೆಸಗಿದ್ದ ಅಕೃತ್ಯಗಳಿಗೆ ಲೆಕ್ಕವಿತ್ತೆ? ಹೃದಯ ಮೂಕವಾಗಿ ರೋದಿಸುತ್ತಿತ್ತು. ಅವನ ನರಳಾಟ, ಕೂಗಾಟ, ಚೀರಾಟ ಕಿವಿಗೆ ಇಂಪಾದ ರಾಗದಂತಿದ್ದವು.

ಪ್ರತಿ ಬಾರಿ ನಿನ್ನ ಬಾಳಿಗೆ ತುತ್ತಾದಾಗಲೂ ಅಮ್ಮ ಹೀಗೆ ಚೀರುತ್ತಿದ್ದರು, ಹೀಗೆ ನರಳುತ್ತಿದ್ದರು..... ಹೌದು..... ಹೀಗೆ..... ಹೀಗೆ.....! ಕಣ್ಣಲ್ಲಿ ನೀರು ಧಾರೆಯಾಗಿ ಹರಿಯುತೊಡಗಿದವು. ಆಗಲೇ ವೈದ್ಯರು ಬಂದು ಅವನ ಕಾಲುಗಳನ್ನು ಮೊಣಕಾಲಿನವರೆಗೆ ತೆಗೆಯಬೇಕೆಂದು ಹೇಳಿದಾಗ ಮನಸ್ಸು ಗಹಗಹಿಸಿ ನಗತೊಡಗಿತು! ಅಮ್ಮ ಮತ್ತೆ ಕಾಣಿಸಿಕೊಂಡಳು. ಈ ಕಾಲುಗಳು ಅಮ್ಮನ ಮೇಲೆ ನಡೆಸಿದ್ದ ಅತ್ಯಾಚಾರದ ನೆನಪು ಇನ್ನೂ ಹಸಿಯಾಗಿದೆ. ಹೃದಯದಲ್ಲಿ ನೆನಪಾಗುತ್ತದೆ..... ಅಮ್ಮನ ಮೈ ಸುಡುತ್ತಿದೆ..... ಅದರಲ್ಲಿಯೇ ಅಡುಗೆ ಮಾಡಿದ್ದಾಳೆ. ಸಾರಿಗೆ ಉಪ್ಪು ಜಾಸ್ತಿಯಾಗಿಬಿಟ್ಟಿದೆ. ಅಪ್ಪ ಊಟದ ಮನೆಯಲ್ಲಿ ಕೈತೊಳೆದು ಕೂತಿದ್ದಾನೆ.... ಅವನ ಸ್ನೇಹಿತರಿಬ್ಬರು ಹೊರಗೆ ಅವನಿಗಾಗಿ ಕಾಯುತ್ತಿದ್ದಾರೆ. ಹೆದರುತ್ತಲೇ ಅಮ್ಮ ಅಪ್ಪನ ತಟ್ಟೆಗೆ ಸಾರು ಬಡಿಸುತ್ತಿದ್ದಾಳೆ. ಒಂದು ತುತ್ತು ಬಾಯಲ್ಲಿ ಇಟ್ಟ ಅಷ್ಟೆ. ಅನ್ನದ ಸಮೇತ ತಟ್ಟೆಯನ್ನು ಎತ್ತಿಕೊಂಡು ಅಲ್ಲಿಯೆ ನಿಂತಿದ್ದ ಅಮ್ಮನ ತಲೆಯ ಮೇಲೆ ಕುಕ್ಕಿದ್ದಾನೆ. ಅವನ ಈ ಅವತಾರ ಕಂಡು ನಾನು ಮೂಲೆ ಸೇರಿಬಿಟ್ಟಿದ್ದೆ. "ಬೇಕೂಂತ ಮಾಡ್ತಿಯೇನೆ.....? ನಾನು ತಿನ್ನಬಾರದ್ದೂಂತ ಮಾಡ್ತಿಯೇನೆ..... ನಿಮ್ಮಪ್ಪನ ಮನೆಯಿಂದ ತಂದು ಬೇಯಿಸ್ತಿಯೇನೆ?" ಎನ್ನುತ್ತಾ ಅಮ್ಮನನ್ನು ಹಿಡಿದು ಬಾರಿಸುತ್ತಿದ್ದಾನೆ. ನಾನಾಗ ಚೀರಲು ಬಾರದಷ್ಟು ಭಯಭೀತಳಾಗಿದ್ದೆ. ಅವನ ಹಿಡಿತದಿಂದ ಬಿಡಿಸಿಕೊಂಡು ಹೇಗೊ ದೂರ ಓಡಿದ ಅಮ್ಮ ಅಂದು ತಡೆಯಲಾರದೆ ಚೆಲ್ಲಿದ್ದ ಅನ್ನವನ್ನು ನೋಡುತ್ತಾ "ಅನ್ನದ ಮೇಲೆ ಸೊಕ್ಕು ಮಾಡುವುದು ಒಳ್ಳೆಯದಲ್ಲಾರಿ......" ಎನ್ನುತ್ತಿದ್ದಾಳೆ ಅಳುತ್ತಾ "ಏನಂದೆ ಮೂರು ಕಾಸಿನೋಳೆ.......? ನನಗೆ ಸೊಕ್ಕು ಅಂದೆಯಾ......?" ಎನ್ನುತ್ತ ಆಕೆಯತ್ತ ಧಾವಿಸಿದ ಅಪ್ಪ ಕಾಲಿನಿಂದ ಝಾಡಿಸುತ್ತಿದ್ದಾನೆ. ಅಮ್ಮ ಉರುಳುರುಳಿ ಬೀಳುತ್ತಿದ್ದಾಳೆ. ಅವಳು ಮೆಲ್ಲಗೆ ಏಳಲು ಪ್ರಯತ್ನಿಸುತ್ತಿರುವಾಗಲೆ ಇನ್ನೊಮ್ಮೆ ಕಾಲಿನಿಂದ ಝಾಡಿಸಿದ್ದಾನೆ. "ಅಯ್ಯೋ...." ಎಂದು ಚೀರುತ್ತಾ ಹಾರಿ ಬಿದ್ದಿದ್ದಾಳೆ ಅಮ್ಮ. ಅಮ್ಮ ಬದುಕುವುದಿಲ್ಲ ಎಂದುಕೊಂಡೆ ನಾನು. ಜೋರಾಗಿ ಅಳುತ್ತಾ ಅಮ್ಮನನ್ನು ಬಿಡಿಸಿಕೊಳ್ಳಲು ಹೋದೆ. "ಅಪ್ಪಾ ನನ್ನಮ್ಮನ್ನ ಬಿಡು....... ಹೊಡೀಬೇಡ ಬಿಡಪ್ಪಾ...... ಅಮ್ಮನ್ನ ಬಿಟ್ಬಿಡಪ್ಪಾ....." ಕೈಮುಗಿಯುತ್ತಾ ಬೇಡಿದೆ.

ನನ್ನನ್ನು ಎತ್ತಿ ಬಿಸಾಕಿದ. ಸೋಫಾದ ಮೇಲೆ ಬಿದ್ದುದ್ದರಿಂದ ಆ ದಿನ ಉಳಿದುಕೊಂಡೆ. ಅಮ್ಮ ಕೆಳಗೆ ಬಿದ್ದು ವಿಲವಿಲನೆ ಒದ್ದಾಡುತ್ತಿದ್ದಾಳೆ. ಅವನು ಅವಳ ಮೇಲೆ ನಿಂತು ತನ್ನ ಕಾಲುಗಳಿಂದ ಒಂದೆ ಸಮನೆ ತುಳಿಯುತ್ತಿದ್ದಾನೆ. ಆ ನೋವಿನಲ್ಲೂ ಅಮ್ಮ ಅವನ ಕಾಲುಗಳನ್ನು ಹಿಡಿದಿದ್ದಾಳೆ..... "ಬೇಡೀಂದ್ರೆ ದಯವಿಟ್ಟು ಬಿಟ್ಬಿಡೀಂದ್ರೆ...... ನಂದು ತಪ್ಪಾಯ್ತೂಂದ್ರೆ....." ಬೇಡುತ್ತಿದ್ದಾಳೆ. ನಾನೂ ಸಹ ಅಲ್ಲಿಂದಲೇ ಕೂಗುತ್ತಿದ್ದೇನೆ "ಅಯ್ಯೋ ಅಮ್ಮನ್ನ ಸಾಯಿಸ್ಬೇಡ ಬಿಡೊ.... ಬಿಟ್ಬಿಡೊ..... ಅಮ್ಮಾ.....?" ನನ್ನ ಕೂಗು ಕೇಳಿ ಹೊರಗಿದ್ದ ಅವನ ಸ್ನೇಹಿತರು ಒಳಕ್ಕೆ ಧಾವಿಸುತ್ತಿದ್ದಾರೆ. ಅಮ್ಮನನ್ನು ಕೆಳಕ್ಕೇ ಹಾಕಿಕೊಂಡು, ಅವಳ ಮೇಲೆ ನಿಂತು ತನ್ನ ಕಾಲುಗಳಿಂದ ಅವಳ ಒಂದೊಂದೆ ಅಂಗವನ್ನು ತುಳಿಯುತ್ತಲಿರುವ ಅವರ ಗೆಳೆಯನ ಪೈಶಾಚಿಕ ರೂಪವನ್ನು ಕಂಡು ದಂಗಾಗಿದ್ದಾರೆ. ನಾನು ಅವರ ಬಳಿಗೆ ಓಡಿದೆ. "ಅಂಕಲ್..... ನಮ್ಮಮ್ಮನ್ನ ಬದುಕಿಸಿ ಅಂಕಲ್..... ಅಮ್ಮನ ಬಿಡಿಸಿ ಅಂಕಲ್...." ನನ್ನ ಗಂಟಲು ಚೀರಿ ಚೀರಿ ಒಣಗಿಹೋಗುತ್ತಿದೆ. ಪ್ರಯಾಸಪಡುತ್ತಾ ಅಪ್ಪನನ್ನು ಎಳೆದುಕೊಂಡು ಹೋಗುತ್ತಿದ್ದಾರೆ ಅವರು. ಆದರೆ ಅಮ್ಮ.....? ಉಟ್ಟ ಸೀರೆಯೆಲ್ಲಾ ಅಸ್ತವ್ಯಸ್ತಗೊಂಡು ಕೂದಲೆಲ್ಲಾ ಕೆದರಿ, ತೊಟ್ಟ ರವಿಕೆಯೆಲ್ಲಾ ಹರಿದುಹೋಗಿ, ಮೈಮೇಲೆಲ್ಲಾ ಕೆಂಪಗೆ ಬಾಸುಂಡೆಗಳು ಮೂಡಿ, ಆಘಾತದಿಂದ ಎಚ್ಚರವಿಲ್ಲದೆ ಬಿದ್ದಿದ್ದಾಳೆ..... "ಅಮ್ಮಾ..... ಅಯ್ಯೊ...... ಅಮ್ಮಾ...." ಎನ್ನುತ್ತಾ ನಾನು ಆಕೆಯ ಮೇಲೆ ಕುಸಿದೆ.

* * *

ಕೆಳಕ್ಕೆ ಕುಸಿದು ಬಿಕ್ಕಿ ಬಿಕ್ಕಿ ಅಳುತ್ತಿದ್ದ ವೃಷ್ಟಿಯನ್ನು ನೋಡಿ "ಬಿ ಬೋಲ್ಡ್ ಮೈ ಚೈಲ್ಡ್ ಟೇಕ್ ಕರೇಜ್...." ಎಂದರು ವೈದ್ಯರು. "ಇಲ್ಲ ಡಾಕ್ಟರ್ ಆ ಕಾಲುಗಳನ್ನು ಕತ್ತರಿಸಿಬಿಡಿ...... ಕತ್ತರಿಸಿಬಿಡಿ ಡಾಕ್ಟರ್......" ಅವರು ಅವಳ ತಲೆ ನೇವರಿಸಿ ಹೊರಹೋದರೂ ಆಕೆಯ ಬಡಬಡಿಕೆ ನಿಲ್ಲಲಿಲ್ಲ. "ಕೊಚ್ಚಿ ಕೊಚ್ಚಿ ಹಾಕಿ ಡಾಕ್ಟರ್..... ತುಂಡುತುಂಡು ಮಾಡಿಬಿಡಿ ಆ ಕಾಲುಗಳನ್ನು. ಅಮ್ಮಾ...... ನಿನಗೆ ಮಾಡಿದ್ದನ್ನೆಲ್ಲಾ ಈಗ ತೀರಿಸುತ್ತಿದ್ದಾನಮ್ಮಾ.... ಈಗ ತೀರಿಸುತ್ತಿದ್ದಾನೆ......!" ಆಟೋದಲ್ಲಿ ಕುಳಿತಾಗಲೂ ತಲೆ ಜುಮ್ಮೆನ್ನುತ್ತಿತ್ತು. ಅವಳ ಮನಸ್ಸು ಆವೇಶಗೊಂಡಿತ್ತು. ಗಂಡು ಜಾತಿಯನ್ನೇ ಸರ್ವನಾಶ ಮಾಡುವ ವಿಚಾರ ಮಾಡುತ್ತಾ ಬಂದಿದ್ದಳು ದಾರಿಯುದ್ದಕ್ಕೂ. ಆದರೆ ಮನೆಯಲ್ಲಿ ಮಗನ ಅಳು ಕೇಳಿ, ಅಳುತ್ತಳುತ್ತಾ ತನ್ನೆಡೆಗೆ ಕೈಚಾಚಿದ್ದ ಅವನ ಮುಖ ನೋಡಿ, ತನ್ನನ್ನೇ ಮರೆತು ಕಂದನನ್ನು ಬಾಚಿ ತಬ್ಬಿ, ಮುತ್ತಿಕ್ಕಿ ಎದೆಗೊತ್ತಿಕೊಂಡಿದ್ದಳು!

ಮೊಲೆ ಚೀಪುತ್ತಾ ಹಾಗೆಯೆ ನಿದ್ದೆ ಹೋದ ಮಗನ ಪಕ್ಕದಿಂದ ಬಲು ಜಾಗರೂಕತೆಯಿಂದ ಸ್ವಲ್ಪವೂ ಸದ್ದಾಗದಂತೆ ಎದ್ದು, ಅವನ ಹೊದಿಕೆಯನ್ನು ಸರಿಪಡಿಸಿ ಹಣೆಗೆ ಮುತ್ತನ್ನಿತ್ತು, ನೊಣಗಳು ಕಾಡದಿರಲೆಂದು ಪರದೆಯನ್ನು

ಇಳಿಬಿಟ್ಟು, ಸುತ್ತಲೂ ಬಿಗಿಯಾಗಿ ಸಿಗಿಸಿ, ಎಲ್ಲವೂ ಸರಿಯಿದೆಯೆ ಎಂದು ಇನ್ನೊಮ್ಮೆ ನೋಡಿ ಅಡುಗೆಮನೆಯತ್ತ ಹೊರಟಳು.

ಅಮ್ಮನನ್ನು ಕೊರಗಿಸಿ, ಕೊರಗಿಸಿ ಸಾಯಿಸಿದ್ದ ಅಪ್ಪ ಇಂದು ಹೆಳವನಾಗಿ ನರಳುತ್ತಾ ಬಿದ್ದಿದ್ದರೆ ಅಪ್ಪನನ್ನೆ ಎರಕಹೊಯ್ದಿದ್ದ ಮಗ ಚಿಕ್ಕ ವಯಸ್ಸಿನಲ್ಲಿಯೆ ಕ್ಯಾನ್ಸರ್‌ಗೆ ಬಲಿಯಾಗಿದ್ದ. ಅಮ್ಮನ ಮೇಲೆ ಪ್ರೀತಿ, ಗೌರವವಾಗಲಿ, ತಂಗಿಯೆಂಬ ಅಕ್ಕರೆ, ಮಮತೆಯಾಗಲಿ...... ಊಹೂಂ ಆ ಶಬ್ದಗಳ ಅರಿವೇ ಇರಲಿಲ್ಲ ಅವನಿಗೆ. ಅಪ್ಪನ ನೆರಳಾಗಿಯೇ ಬೆಳೆದ ಅವನು ಅಪ್ಪನಂತೆ ನಡೆದುಕೊಳ್ಳುತ್ತಿದ್ದ. ಅಮ್ಮನನ್ನು ಏಕವಚನದಲ್ಲಿಯೆ ಮಾತನಾಡುತ್ತಿದ್ದ. ಹೆತ್ತು, ಹೊತ್ತು ಸಾಕಿದ ತಾಯಿಯನ್ನು ಹಾಗೆ ಮಾತನಾಡಿಸಬಾರದೆಂದು ಸೋದರತ್ತೆ ಒಮ್ಮೆ ಹೇಳಿದ್ದಾಗ "ಅಯ್ಯೋ ಯಾರೂ ಮಾಡದೆ ಇರೋ ಘನಕಾರ್ಯವಲ್ಲ ಹಡೆಯೋದು. ಪ್ರತಿಯೊಂದು ಹೆಣ್ಣೂ ಒಂದು ದಿನ ಹಡೆಯಲೇಬೇಕು; ಹಾಗೆ ಈಕೆ ಕೂಡ ನನ್ನ ಹಡೆದಿದ್ದಾಳೆ. ಅದರಲ್ಲಿ ಯಾವ ದೊಡ್ಡತನವಿದೆ ಅವಳ ಕಲಸವೆ ಅದಲ್ಲವೆ....." ಎನ್ನಬೇಕೆ! ತನ್ನೆರಡು ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಕೆಳಗೆ ಕುಸಿದಿದ್ದಳು ಅಮ್ಮ ಆ ಮಾತು ಕೇಳಿ. ಅವನನ್ನು ಹಡೆಯುವಾಗ ಅನುಭವಿಸಿದ ನೋವಿಗಿಂತಲೂ ಅಧಿಕವಾಗಿ ನೋವುಂಡಳು ಆ ಮಾತಿನಿಂದ ಅಸಹಾಯಕಳಾಗಿದ್ದಳು ಆಕೆ. ಪ್ರತಿ ಅವಹೇಳನದ, ದುಃಖದ, ನೋವಿನ, ಅಪಮಾನದ ಕ್ಷಣದಲ್ಲಿಯೂ ಅಮ್ಮನಿಗೆ ಜೊತೆಯಾಗಿದ್ದವಳು ನಾನು. ಅಪ್ಪ, ಅಣ್ಣನನ್ನು ಎದುರಿಸುವ ಧೈರ್ಯ, ಶಕ್ತಿ ನನ್ನಲ್ಲಿ ಇರಲಿಲ್ಲ ನಿಜ. ಆದರೆ ಅಮ್ಮನಿಗೆ ಸಾಂತ್ವನ ನೀಡಬಲ್ಲವಳಾಗಿದ್ದೆ. ನಾವಿಬ್ಬರು ಅವರ ಭಯದ ನೆರಳಿನಲ್ಲಿಯೆ ಬದುಕಿದವರು. ಅವರ ಮೇಲೆ ಪ್ರೀತಿ, ಗೌರವಕ್ಕಿಂತ ಭಯವೇ ಅಧಿಕವಾಗಿತ್ತು. ಮಗನಿಗೂ ಹೆದರುತ್ತಿದ್ದಳು ಅಮ್ಮ! ಆದರೆ ಅದು ಅವನ ಖಾಯಿಲೆಗೆ ತುತ್ತಾಗುವವರೆಗೆ ಮಾತ್ರ. ನೋವು ಅವನನ್ನು ಮೆತ್ತಗಾಗಿಸಿತ್ತು. ಸಂಕಟದ ಸಮಯದಲ್ಲಿ ಅಮ್ಮನಿಗೆ ಶರಣು ಹೋಗಿದ್ದ. ಅವನ ಬಾಯಿಂದ ಹೊರಟಿದ್ದ "ಅಮ್ಮಾ....." ಎಂಬ ಆರ್ತ ಕರೆಗೆ ಅಮ್ಮ ಕರಗಿದ್ದಳು. ಆ ಕ್ಷಣವೆ ಅವನನ್ನು ಕ್ಷಮಿಸಿದ್ದಳು; ಎಲ್ಲವನ್ನೂ ಮರೆತು ಬಿಟ್ಟಿದ್ದಳು. ಹುಟ್ಟಿದಾಗ ಅವರ ಮಡಿಲಲ್ಲಿ ನಲಿದಾಡಿದ್ದ ಮಗ ಸಾಯುವಾಗ ಮತ್ತೆ ಅವರ ಮಡಿಲನ್ನು ಆಶ್ರಯಿಸಿದ್ದ. ಮಗನ ಹೆಣವನ್ನು ತಟ್ಟಿ ಅಳುತ್ತಿದ್ದ ಅಮ್ಮನನ್ನು ಸೋಜಿಗದಿಂದ ನೋಡುತ್ತಿದ್ದೆ ನಾನು. ನನ್ನ ಕಣ್ಣಿನಿಂದ ಹನಿ ನೀರೂ ಉದುರಲಿಲ್ಲ. ಅಪ್ಪ ಅನಂತರವೂ ಸರಿಹೋಗಲಿಲ್ಲ; ಅಮ್ಮ ಹೆಚ್ಚು ದಿನ ಬದುಕಲೂ ಇಲ್ಲ. ನನ್ನನ್ನು ಈ ಪ್ರಪಂಚದಲ್ಲಿ ಒಂಟಿಯಾಗಿ ಬಿಟ್ಟು ಹೋಗಿದ್ದಳು.

ಪೃಥ್ವಿಯ ಕಣ್ಣಿನಿಂದ ಉದುರಿದ ನೀರು ಒಲೆಯ ಮೇಲೆ ಹಾಲು ಕಾಯಿಸಲು ಇಟ್ಟಿದ್ದ ಪಾತ್ರೆಯ ಕಂತಕ್ಕೇ ಬಿದ್ದು "ಚುರ್ರ್....." ಎಂದು ಶಬ್ದವಾದಾಗ ಎಚ್ಚೆತ್ತು ಪಾತ್ರೆಯನ್ನು ಕೆಳಗಿಳಿಸಿ ಮಗನ ಬಳಿಗೆ ಹೊರಟಳು. ಪರದೆಯನ್ನೆತ್ತಿ ಮೇಲಕ್ಕೆ

ಹಾಕಿ, ಅವನ ಪಕ್ಕದಲ್ಲಿ ಕುಳಿತು, ಮಗನ ಹಣೆಯ ಮೇಲೆ ಮೃದುವಾಗಿ ಕೈಯಾಡಿಸುತ್ತಿದ್ದಳು..... ಅಮ್ಮ ಕಾಣಿಸಿದಳು !

ಹೌದು, ಅಮ್ಮ ಹೋದ ಮೇಲೆ ನನಗೆ ಒಂದೇ ಯೋಚನೆ 'ಅಮ್ಮನಿಗೆ ಮಗನನ್ನು ಕ್ಷಮಿಸಲು ಅದ್ಹೇಗೆ ಸಾಧ್ಯವಾಯ್ತು!' ಎಂದೂ 'ಅವಳ ಜಾಗದಲ್ಲಿ ನಾನಿದ್ದಿದ್ದರೆ ಖಂಡಿತ ಕ್ಷಮಿಸುತ್ತಿರಲಿಲ್ಲ. ಅವನ ಸಾವಿಗೆ ಕಣ್ಣೀರು ಹಾಕುತ್ತಿರಲಿಲ್ಲ. ಬದಲಿಗೆ ಸಮಯ ಸಿಕ್ಕರೆ ನಾನೇ ಅವನ ಕುತ್ತಿಗೆ ಹಿಸುಕಿ ಸಾಯಿಸುತ್ತಿದ್ದೆ' ಎಂದು. ಅಯ್ಯೋ ಒಂದೇ, ಎರಡೇ. ನನ್ನ ಮನದ ತುಂಬ ವಿಷ ತುಂಬಿಕೊಂಡಿದ್ದೆ ಅವರಿಬ್ಬರ ಮೇಲೆ. ಅವನಂತು ನೆಗೆದುಬಿದ್ದ. ಆದರೆ ಅಪ್ಪ ಎಂಬ ರಾಕ್ಷಸನೊಡನೆ ನಾನು ಒಂಟಿಯಾಗಿ ಜೀವಿಸಬೇಕಿತ್ತು. ಆ ಮನೆ ನನಗೆ ಭೂತದ ವಾಸಸ್ಥಾನದಂತೆ ಇತ್ತು. ಅಮ್ಮನ ಪಡಿಯಚ್ಚಿನಂತೆ ಇದ್ದ ನಾನೆಂದರೆ ಅವನಿಗೆ ತಿರಸ್ಕಾರ. ನನ್ನ ಮೇಲೆ ಕೈ ಮಾಡದಿದ್ದರೂ ಬಾಯಿಗೆ ಮಿತಿ ಇರಲಿಲ್ಲ. ಕ್ಷಣಕ್ಷಣವೂ ಹೆದರಿಕೆಯಿಂದ ಸಾಯುತ್ತಿದ್ದೆ. ಒಂದು ದಿನ ಇದ್ದಕ್ಕಿದ್ದಂತೆ ಅತ್ತೆ ಬಂದು "ನಿನ್ನ ಮದುವೆ......!" ಎಂದಳು. ನಾನು ಕಂಗಾಲಾದೆ. ಗಂಡ, ಮನೆ, ಮಕ್ಕಳು ಎಂಬುದನ್ನು ಕಲ್ಪಿಸಿಕೊಳ್ಳಲು ಭಯವಾಗುತ್ತಿತ್ತು. ವಯಸ್ಸಿಗೆ ಸಹಜವಾದ ಆಸೆ, ಆಕಾಂಕ್ಷೆ, ಬಯಕೆಗಳೊಂದೂ ನನಗಿರಲಿಲ್ಲ. ಪ್ರೀತಿ, ಪ್ರೇಮ ನನ್ನ ಊಹೆಗೂ ನಿಲುಕದ ವಿಷಯವಾಗಿತ್ತು. ಮದುವೆ ಒಂದು ಭಯಂಕರ ದುಃಸ್ವಪ್ನದಂತೆ ನನ್ನನ್ನು ಪೀಡಿಸಿತು. ಆದರೆ ನಾನು ಅಪ್ಪನ ಮಾತನ್ನು ತೆಗೆದು ಹಾಕುವಂತೆ ಇರಲಿಲ್ಲ. ಅವನು ಹೇಳಿದ್ದಕ್ಕೆಲ್ಲಾ ತಲೆಯಾಡಿಸಿದೆ !

ಮೊದಲ ರಾತ್ರಿಯೆ ನಾನು ನನ್ನ ಗಂಡನಾದವನ ಮುಖ ನೋಡಿದ್ದು. ಅವನನ್ನು ನೋಡಿ ಅನುರಾಗ ಹುಟ್ಟುವ ಬದಲು ಹೇಸಿಗೆಯೆನಿಸಿತ್ತು. ಮೇಲಿನಿಂದ ಕೆಳಗಿನವರೆಗೆ ಏಕವಾಗಿದ್ದ. ಸುಮಾರು ನಲವತ್ತು, ನಲವತ್ತೈದರ ವಯಸ್ಸಿನವನು; ಆದರೇನು ದೊಡ್ಡ ಶ್ರೀಮಂತ ! ನನ್ನ ದಾಂಪತ್ಯದ ಮೊದಲ ರಾತ್ರಿ ನನ್ನ ಪಾಲಿಗೆ ಅತಿ ಭೀಕರವಾದ, ಅಸಹ್ಯಕರವಾದ ರಾತ್ರಿಯಾಗಿತ್ತು.

ಫ್ಯಾನು, ಟಿ.ವಿ. ಫ್ರಿಜ್‌ನಂತೆ ಹೆಂಡತಿಯೂ ಒಂದು ಭೋಗದ ವಸ್ತು ಎಂಬಂತೆ ವರ್ತಿಸುತ್ತಿದ್ದ ಗಂಡ. ಮನಸ್ಸು ಬಂದಾಗ ಹೋಗಿ ಬರುತ್ತಿದ್ದ. ಅವನಿಗೆ ಬೇಕೆನಿಸಿದಾಗ ಪಕ್ಕಕ್ಕೆಳೆದುಕೊಳ್ಳುತ್ತಿದ್ದ; ಬೇಡೆನಿಸಿದಾಗ ದೂರತಳ್ಳುತ್ತಿದ್ದ. ಪಾರ್ಟಿ ಫಂಕ್ಷನ್‌ಗಳಿಗೆ ವಸ್ತು ಪ್ರದರ್ಶನದ ಬೊಂಬೆಯಂತೆ ಅಲಂಕರಿಸಿಕೊಂಡು ಅವನ ಜೊತೆಯಲ್ಲಿ ಹೋಗಲೇಬೇಕಿತ್ತು. ಅವನು ಹೇಳಿದವರ ಜೊತೆಯಲ್ಲಿ ಅವರಿಗನುಗುಣವಾಗಿ ವರ್ತಿಸಬೇಕಿತ್ತು. ಅಪ್ಪನ ಮನೆಯೊಂದು ನರಕವಾದರೆ, ಗಂಡನ ಮನೆ ಇನ್ನೊಂದು ನರಕ. "ಥೂ......!" ಎಂದು ಅಸಹ್ಯದಿಂದ ತಲೆಕೊಡಹಿದಾಗ ಮಗ ಮಿಸುಕಾಡಿದ. ಅವನ ಸನಿಹಕ್ಕೇ ಸರಿದು ಮೆಲ್ಲನೆ, ಮೃದುವಾಗಿ ತಟ್ಟಿದಾಗ ಹಾಗೆಯೇ ನಿದ್ದೆ ಹೋದ. ಇವನು ನನ್ನ ಹೊಟ್ಟೆಯಲ್ಲಿ ರೂಪುಗೊಳ್ಳುತ್ತಿದ್ದಾನೆ

ಎಂದು ಗೊತ್ತಾದ ದಿನ ಸಿಡಿಲೆರಗಿದಂತೆ ಆಗಿತ್ತು ನನಗೆ. ಬೇಡವೆಂದು ಅದೆಷ್ಟು ಗಲಾಟೆ ಮಾಡಿದ್ದೆ. ಆದರೆ ಅತ್ತೆ ಬಿಡಲಿಲ್ಲ. ಅವಳು ನನ್ನ ಜೊತೆಯಲ್ಲೆ ಇದ್ದಳು. 'ಟೂರ್....' ಎಂದು ಹೋದ ಗಂಡ ಅಲ್ಲಿಯೇ ಎಲ್ಲೊ ಕೊಲೆಯಾಗಿದ್ದ. ಹಾರ್ಟ್‌ಆಟಾಕ್ ಎಂದು ಮುಚ್ಚಿ ಹಾಕಿದರು. ನನಗೂ ಅದರಲ್ಲಿ ಆಸಕ್ತಿಯಿರಲಿಲ್ಲ! ಆಳವಾಗಿ ಹೋಗಲೂ ಇಲ್ಲ.

ನಿಜ ಹೇಳಬೇಕೆಂದರೆ ನನಗೆ ಜೀವನದಲ್ಲಿಯೆ ಜಿಗುಪ್ಸೆ ಮೂಡಿತ್ತು. ಕೇವಲ ಒಂದು ಯಂತ್ರದಂತೆ ಬದುಕುತ್ತಿದ್ದಾಗ ತಾಯಾಗಲಿರುವ ವಿಷಯ ತಿಳಿದಿತ್ತು. ಪ್ರತಿ ಕ್ಷಣವೂ "ತಾಯಾಗದಿದ್ದರೂ ಸರಿಯೆ ನನ್ನ ಗರ್ಭದಿಂದ ಗಂಡು ಮಾತ್ರ ಹುಟ್ಟುವುದು ಬೇಡ" ಎಂದು ದೇವರಲ್ಲಿ ಮೊರೆಯಿಡುತ್ತಿದ್ದೆ. 'ಗಂಡು ಹುಟ್ಟಿದರೆ.....?' ಎಂಬ ಯೋಚನೆಯೇ ಸ್ತ್ರೀಯ ಅತ್ಯಂತ ಸಹಜವಾದ ತಾಯ್ತನದ ಬಯಕೆಯನ್ನೆ ಕಮರಿಸುತ್ತಿತ್ತು. ದಿನಗಳುರುಳಿದಂತೆ ನಿರ್ವಿಣ್ಣಳಾಗುತ್ತಾ ನನ್ನ ಸುತ್ತಲೂ ಅಂಧಕಾರವನ್ನೆ ಸೃಷ್ಟಿಸಿಕೊಳ್ಳುತ್ತಾ ಹೋದೆ. ಆದರೆ ಅತ್ತೆ ಸುಮ್ಮನೆ ಕೂಡಲಿಲ್ಲ. ಎಲ್ಲವನ್ನೂ ನೋಡಿಕೊಳ್ಳುತ್ತಿದ್ದರು. ಅಂತು ಹೀಗೆ ನಾಲ್ಕೈದು ತಿಂಗಳು ಕಳೆದವು. ಆ ದಿನ ಅದೇಕೊ ಅಮ್ಮ ಬಹಳ ನೆನಪಾಗುತ್ತಲಿದ್ದಳು. ಆಕೆ ಬೇಕೆನಿಸುತ್ತಿತ್ತು ನನಗೆ. ಅವಳ ಯೋಚನೆಯಲ್ಲೆ ಇರುವಾಗ ಇದ್ದಕ್ಕಿದ್ದಂತೆ ಹೊಟ್ಟೆಯಲ್ಲಿ ಏನೋ ಆದಂತಾಯ್ತು. ನಾನದಕ್ಕೆ ಲಕ್ಷ್ಯ ಕೊಡಲಿಲ್ಲ. ಆದರೆ ನಾಲ್ಕೈದು ಬಾರಿ ಹಾಗೆ ಆದಾಗ ನನಗೆ ಏನಿರಬಹುದು ಎಂಬ ಕುತೂಹಲ ಮೂಡಿತು. ಅಂದು ಸಂಜೆ ಬಂದ ವೈದ್ಯರು "ಮಗು ಮಿಸುಕಾಡುತ್ತಾ..." ಎಂದು ಕೇಳಿದಾಗ ವಿಸ್ಮಯಗೊಂಡೆ. ಅತ್ತೆ ಅದೇನೆಂದು ಹೇಳಿದಳಾದರೂ ನನ್ನ ಹೊಟ್ಟೆಯಲ್ಲಿ ಏನೋ ಆಗುವುದು ಹೆಚ್ಚಿದಂತೆಲ್ಲಾ ನನಗೆ ಅವಳ ಮಾತು ಅರ್ಥ ಆಗಿತ್ತು. ನನಗಾಗುತ್ತಿದ್ದ ವಿಚಿತ್ರ ಅನುಭವ, ನನ್ನ ಹೊಟ್ಟೆಯಲ್ಲಿರುವ ಮಗುವಿನ ಓಡಾಟದಿಂದ ಉಂಟಾದ್ದು ಎಂಬ ಸತ್ಯ ಅರಿವಿಗೆ ಬಂದೊಡನೆ ನನ್ನ ಮನಸ್ಸು ಪುಲಕಗೊಂಡು, ದೇಹ ರೋಮಾಂಚನಗೊಂಡಿತ್ತು. ಹೀಗೆ ಅದು ಹೊಟ್ಟೆಯಲ್ಲೆಲ್ಲಾ ಓಡಾಡಿದಂತಾಗಿ ನನಗರಿವಿಲ್ಲದೆ ಮನಸ್ಸು ಮುದಗೊಳ್ಳುತ್ತಿತ್ತು. ಕ್ರಮೇಣ ಯಂತ್ರಕ್ಕೆ ಜೀವ ಬಂದಿತ್ತು. ಯಾವುದೋ ವರ್ಣಿಸಲಾಗದ ರೀತಿಯಲ್ಲಿ ಪ್ರೀತಿಯನ್ನು ಅನುಭವಿಸುತ್ತಿರುವ ಭಾವನೆ, ನನ್ನ ಸುತ್ತಲಿದ್ದ ಅಂಧಕಾರದ ಕೋಟೆಯನ್ನು ಭೇದಿಸಿ, ಅಲ್ಲಿ ಬೆಳಕಿನ ಕಿರಣಗಳನ್ನು ತೂರಿಸಿತ್ತು. ತನ್ನೊಳಗೆ ಸೃಷ್ಟಿಯಾಗುತ್ತ, ಅಲ್ಲಿಂದಲೆ ತುಂಟತನದಿಂದ ತನ್ನಿರುವನ್ನು ನನಗೆ ನೆನಪಿಸುತ್ತಿದ್ದ ಹೊಸಜೀವದ ಬಗ್ಗೆ ನನಗೆ ಕಾತರವಿತ್ತು. ಕುತೂಹಲವಿತ್ತು; ನನ್ನ ನೋವೆಲ್ಲಾ ನಿವಾರಿಸಿ ನನ್ನನ್ನು ಮನುಷ್ಯಳನ್ನಾಗಿಸಿದ್ದ ಗರ್ಭದ ಬಗ್ಗೆ ಗೌರವ ಬೆಳೆದಿತ್ತು. ನನ್ನಲ್ಲಿ ಜಾಗೃತಗೊಂಡಿದ್ದ ತಾಯ್ತನ ಮನಸ್ಸಿನ ದುಗುಡ, ದುಮ್ಮಾನ, ರೋಷಾವೇಷಗಳನ್ನೆಲ್ಲಾ ಮೆಟ್ಟಿ ನಿಂತಿತ್ತು.

ಅಂದು ರಾತ್ರಿಯಿಡಿ ನೋವು ನಿದ್ರಿಸಲು ಬಿಡಲಿಲ್ಲ. ಅವುಡುಗಚ್ಚಿ ನೋವನ್ನು ನುಂಗುವ ವಿಫಲ ಯತ್ನ ಮಾಡುತ್ತಿರುವಾಗಲೇ ಅದು ತೀವ್ರವಾಗಿ ಜೋರಾಗಿ ಚೀರಿದ್ದೆ. ಹಿಂದೆಯೆ ಕೇಳಿ ಬಂತು ಮಗುವಿನ ಅಳು. ನನ್ನೆಲ್ಲಾ ಸುಸ್ತು, ಆಯಾಸ ಮಾಯವಾಗಿತ್ತು. ಅತ್ತೆ ಹೆದರುತ್ತಲೇ ಮಗುವನ್ನು ಪಕ್ಕಕ್ಕೆ ತಂದು "ಗಂಡು....." ಎಂದಿದ್ದಳು. ನಗುನಗುತ್ತಲೇ ಅವನನ್ನು ಮಡಿಲಿಗೆ ಹಾಕಿಕೊಂಡಿದ್ದೆ. ಗಂಡು ಹೆಣ್ಣೆಂಬ ಭೇದವಾಗಲಿ, ಗಂಡಿನ ಬಗ್ಗೆಯಿದ್ದ ನಿಕೃಷ್ಟತೆ, ಆಕ್ರೋಶವಾಗಲೀ ಒಂದೂ ನೆನಪಿರಲಿಲ್ಲ. ಕಣಕಣವೂ ನನ್ನ ಮಗುವಿನಿಂದ ತುಂಬಿತ್ತು. ಪಕ್ಕದಲ್ಲಿ ಮಲಗಿ ಮೊಲೆ ಕುಡಿಯುವ ನನ್ನ ಕಂದನನ್ನು ನೋಡುತ್ತಾ ಮೈ ಮರೆಯುತ್ತಿದ್ದೆ. ನನಗಾಗ ಉಂಟಾಗುತ್ತಿದ್ದ ವಿಚಿತ್ರ ತೃಪ್ತಿ, ಆನಂದ ಸ್ವರ್ಗಸುಖವನ್ನು ನೀಡುತ್ತಿದ್ದವು. ನನ್ನ ರಕ್ತಮಾಂಸವನ್ನೆ ಹಂಚಿಕೊಂಡು ಹುಟ್ಟಿದ್ದ ನನ್ನ ಕರುಳಿನ ಕುಡಿ ಮಡಿಲಲ್ಲಿ ಮಲಗಿದಾಗ, ಅವನ ಸಾಮೀಪ್ಯವೆ ನನಗೆ ಆಸರೆಯಾಗಿತ್ತು. ನನ್ನ ಬಾಳಿನಲ್ಲಿದ್ದ ಕಗ್ಗತ್ತಲನ್ನು ಓಡಿಸುತ್ತಾ ಸೂರ್ಯನಂತೆ ಉದಯಿಸಿದ್ದ ಮಗ ಬದುಕಿಗೊಂದು ಹೊಸರೂಪ ಕೊಟ್ಟಿದ್ದ. ನಾನು ಅಂದುಕೊಳ್ಳುತ್ತಿದ್ದೆ "ಇದೆಂತಹ ವ್ಯಾಮೋಹ......?" "ತಾಯ್ತನಕ್ಕೆ ಅದೆಂತಹ ಶಕ್ತಿ ಇದೆ.....?" ಎಂದು ಅಮ್ಮ ನೆನಪಾಗುತ್ತಿದ್ದಳಾಗ ಅಂದು ಮಗನನ್ನು ಕ್ಷಮಿಸಿದ್ದ ಅವಳ ಔದಾರ್ಯದ ಹಿಂದಿದ್ದ ಶಕ್ತಿ ಯಾವುದೆಂದು ಅರಿವಾಗಿತ್ತು. ಹಾಗೆಂದು ಅಪ್ಪ, ಅಣ್ಣನನ್ನು ಮರೆತಿರಲಿಲ್ಲ ನಾನು. ಆದರೆ ಅದರ ಬಗ್ಗೆ ಲಕ್ಷ್ಯವಿರಲಿಲ್ಲ. ನಮ್ಮ ಹೊಟ್ಟೆಯಲ್ಲಿ ಒಳ್ಳೆಯ ಮಕ್ಕಳು ಹುಟ್ಟುತ್ತಾರೆ...... ಅವರೇ ಮುಂದೆ ನಮ್ಮ ಜೀವನದ ಆಧಾರ ಎಂಬಂತಹ ಕ್ಷುಲ್ಲಕ ಕಾರಣಗಳು ಅಥವಾ ಆಸೆಗಳು ಬಸಿರು, ಪ್ರಸವದಂತ ಕಠಿಣವಾದ ಅವಸ್ಥೆಗಳನ್ನು ದಾಟಿ ಬರುವ ಶಕ್ತಿಯನ್ನು ಹೆಣ್ಣಿಗೆ ಕೊಡಲು ಸಾಧ್ಯವಾಗಿದ್ದಲ್ಲಿ ತಾಯ್ತನವೊಂದು ಕೇವಲ ಕೊಟ್ಟುಕೊಳ್ಳುವ ವ್ಯವಹಾರ ಆಗುತ್ತಿತ್ತಷ್ಟೆ.

ನಿದ್ದೆಯಲ್ಲೆ ಅಮ್ಮ ಪಕ್ಕದಲ್ಲಿ ಇರುವಳೋ ಇಲ್ಲವೋ ಎಂದು ತಡಕಾಡುತ್ತಿದ್ದ ಮಗನನ್ನು ಗಮನಿಸಿ ಅತ್ತ ಸರಿದು "ಇಲ್ಲೆ ಇದ್ದೀನಿ ಚಿನ್ನಾ......" ಎನ್ನುತ್ತಾ ಅವನನ್ನು ತಬ್ಬಿಕೊಂಡಾಗ, ಬೆಚ್ಚಗಿನ ಅಪ್ಪುಗೆಯಲ್ಲಿ ಹಾಗೆಯೆ ಆತುಕೊಂಡ. ಹಿಂದೊಮ್ಮೆ ಒಂದು ಗಂಡಿಗೆ ಜನ್ಮ ಕೊಡುವ ವಿಚಾರವೆ ನನ್ನ ತಾಯ್ತನದ ಬಯಕೆಯನ್ನು ಚಿವುಟುತ್ತಿದ್ದು, ಎಲ್ಲಾ ಹರಕೆಗಳು ಹುಸಿಯಾಗಿ ಮಗನೆ ಮಡಿಲು ತುಂಬಿ, ಅವನಲ್ಲೆ ನನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತಿದ್ದ ನನ್ನ ಈಗಿನ ಪರಿಗೆ ನಾನೇ ಅಚ್ಚರಿಗೊಳ್ಳುತ್ತಿದ್ದೆ. ತಾಯ್ತನಕ್ಕೆ ಅಂಥಾ ವರ್ಣಿಸಲಾಗದ, ಅಳೆಯಲಾಗದ ಅದ್ಭುತ ಶಕ್ತಿಯಿತ್ತು. ಮಕ್ಕಳಿಂದ ಎಷ್ಟೇ ನೋವುಂಡರೂ ಅದನ್ನು ಕ್ಷಣದಲ್ಲಿ ಮರೆತು ಅವರ ಉಪಚಾರಕ್ಕೆ ನಿಲ್ಲುವ, ಅವರ ಸುಖದುಃಖದಲ್ಲಿ ಭಾಗಿಯಾಗಿ ಅವರ ಹಿತಚಿಂತನೆ ಮಾಡುವ, ಅವರಿಗಾಗಿ ಮರುಗುವ ಈ

ಎಲ್ಲಾ ಕ್ರಿಯೆಗಳ ಹಿಂದಿರುವ ಅನನ್ಯ ಪ್ರೇಮದ ಆಳ ಅಳತೆಗೆ ಸಿಗುವುದು ಅನುಭವಕ್ಕೆ ಮಾತ್ರ.

"ಪಾಪುಗೆ ಹಾಲು ಬಿಡಿಸಬೇಕಲ್ಲವೆ.....?" ಈ ಯೋಚನೆ ಅದೇಕೋ ಹೃದಯವನ್ನು ತಳಮಳಗೊಳಿಸಿತು. ಮಗ ದೊಡ್ಡವನಾಗುತ್ತಿದ್ದಾನೆ! ಅದೇಕೆ ಸಮಯ ಹೀಗೆ ಓಡುವುದೊ......? ಇವನೇಕೆ ಇಷ್ಟು ವೇಗದಲ್ಲಿ ಬೆಳೆಯುತ್ತಾ ಹೋಗಬೇಕೊ...... ಈ ಕಂದ ಹೀಗೆಯೇ ಇದ್ದುಬಿಡುವಂತಿದ್ದರೆ.......!

ಅದೇಕೊ ಖಿನ್ನತೆ ಆವರಿಸಿಕೊಂಡಿತು. ಯಂತ್ರಮಾನವರ ಈ ಯುಗದಲ್ಲಿ ಮನುಷ್ಯನು ಕ್ರಮೇಣ ಯಂತ್ರವಾಗುವ ಸನ್ನಾಹದಲ್ಲಿರುವ ಈ ಕಾಲದಲ್ಲಿ ತನ್ನ ಆಗಮನದಿಂದ ನನ್ನ ಜನ್ಮ ಸಾರ್ಥಕಗೊಳಿಸಿ, ಪ್ರತಿಯೊಂದು ಕಣವನ್ನು ಅತ್ಯಂತ ಸುಮಧುರಗೊಳಿಸಿ, ರೋಮಾಂಚನಗೊಳಿಸಿದ ಈ ಕಂದನೆ ಮುಂದೊಂದು ದಿನ ನನ್ನ ಈ ಭಾವುಕತೆಯನ್ನು ಅಪಹಾಸ್ಯ ಮಾಡುವಂತಾದರೆ......

ಈ ಯೋಚನೆ ಬಂದೊಡನೆ ಮನಸ್ಸು ದೇವರ ಮೊರೆ ಹೊಕ್ಕಿತು. "ಓಹ್ ದೇವರೆ....... ನನ್ನ ಕಂದನ ಈ ಸುಂದರವಾದ ಆಕೃತಿಯೊಂದಿಗೆ, ಅವನ ಈ ಮುಗ್ಧತೆಯೊಂದಿಗೆ; ಸುಂದರವಾದ ನಗುವಿನೊಂದಿಗೆ; ಮನಸ್ಸಿಗೆ ಮುದ ನೀಡುವ ಅವನ ಸಾಮೀಪ್ಯದೊಂದಿಗೆ; ಪುಲಕಗೊಳಿಸುವ ಈ ಬೆಚ್ಚಗಿನ ಅಪ್ಪುಗೆಯೊಂದಿಗೆ; ಹಾಲುಣಿಸುವಂತಹ ಮಧುರವಾದ ಅನುಭವದೊಂದಿಗೆ; ನಿರ್ವಂಚನೆಯ ಪ್ರೀತಿಯೊಂದಿಗೆ ಸಮಯ, ತನ್ನ ಓಟವನ್ನು ನಿಲ್ಲಿಸಿ, ಇಲ್ಲಿಯೆ ಹೀಗೆಯೆ ಸ್ಥಗಿತಗೊಳ್ಳಬಾರದೆ......?"

ಗೋಡೆಯ ಮೇಲಿದ್ದ ಗಡಿಯಾರ 'ಢಣ್......' ಎಂದು ಬಾರಿಸಿದಾಗ ಪೃಥ್ವಿ ಬೆಚ್ಚಿ ಕಣ್ತೆರೆದಳು. ಸಮಯ ಓಡುತ್ತಲೆ ಇತ್ತು. ಆಗಲೇ ಎಚ್ಚರಗೊಂಡ ಮಗ ಅಮ್ಮನ ಮಡಿಲಿನಿಂದ ಹೊರಬಂದು, ಆಕೆಯತ್ತ ನೋಡಿ ತನ್ನ ಬೊಚ್ಚು ಬಾಯಗಲಿಸಿ ನಕ್ಕಾಗ, ಅವಳ ಕಣ್ಣಂಚಿನಲ್ಲಿದ್ದ ನೀರು ಥಳಕ್ಕನೆ ಕೆಳಗುರುಳಿತು.

***

# ಒಳಗುದಿ

ಗಡಿಯಾರ 'ಢಣ್.......' ಎಂದು ಒಂದು ಬಾರಿಸಿದಾಗ ಪಕ್ಕನೆ ತೆರೆದುಕೊಂಡವು ಕಣ್ಣುಗಳು. ಭಗಭಗನೆ ಉರಿಯುತ್ತಿದ್ದವು. ಇಂದು ಅಪರೂಪಕ್ಕೆ ರಾಜು ಮಧ್ಯಾಹ್ನಕ್ಕೆ ಮನೆಗೇ ಊಟಕ್ಕೆ ಬರುವುದಾಗಿ ಹೇಳಿ ಹೋಗಿದ್ದು ನೆನಪಾಗಿ ಅಡುಗೆ ಮನೆಯುತ್ತ ನಡೆದೆ. ಊಟ ಮಾಡುತ್ತ ಹೇಳಿದರು ರಾಜು "ಕಂಪನಿಯ ಮ್ಯಾನೇಜರ್ ರಾಮು ಸಿಕ್ಕಿದ್ರು..... ಗೌರಿ ಫ್ಯಾಮಿಲಿ, ಬಾಸ್ ಫ್ಯಾಮಿಲಿ ಸೇರಿ ಊಟಿಗೆ ಹೋಗಿದ್ದಾರಂತೆ......." ಎಂದು. ಎದೆಯಲ್ಲಿ ಯಾಕೋ ಚಳುಕು ಮೂಡಿದಂತಾಯ್ತು. ಮುಖ ಕಿವಿಚಿದ್ದು ಕಂಡು "ಯಾಕೆ ? ಏನಾಯ್ತು ?" ಎಂದು ಕೇಳಿದ ರಾಜುಗೆ "ಸ್ವಲ್ಪ ಸುಸ್ತಪ್ಪೆ......" ಎಂದುತ್ತರಿಸಿದೆ. "Take rest......." ಎಂದವರು ಹೇಳಿ ಹೋದ ಮೇಲೆ ನಾನು restless ಆಗತೊಡಗಿದೆ. ಮನಸ್ಸನ್ನು ಹಿಡಿತಕ್ಕೆ ತೆಗೆದುಕೊಳ್ಳುವ ಸಲುವಾಗಿ ನನ್ನ ಅತಿಪ್ರಿಯವಾದ ತಾಣ ನನ್ನ ತೋಟಕ್ಕೆ ನಡೆದು, ಮೆದುಳಿಗೆ ವಿರಾಮ ಸಿಗಲಿ ಎಂದು ಪೈಪ್ ಎಳೆದು ನಲ್ಲಿಗೆ ಹಚ್ಚಿ, ನೀರು ಹಾಯಿಸುತ್ತ ನಿಂತೆ. ಕೈಗಳು ಯಾಂತ್ರಿಕವಾಗಿ ಅತ್ತಿತ್ತ ಮಿಸುಕಾಡುತ್ತಿದ್ದವೇ ಹೊರತು ಏನು ಮಾಡಿದರೂ ಕೆಲಸದಲ್ಲಿ ತೊಡಗದಾಯ್ತು ಈ ಹಾಳು ಮನಸ್ಸು. ತೋಟಕ್ಕೆ ಕಾಲಿಟ್ಟ ಕ್ಷಣವೇ ಊಟಿ ಕಣ್ಮುಂದೆ ಸುಳಿದು, ಒತ್ತರಿಸಿಕೊಂಡು ಬರುತ್ತ ಮನಃಪಟಲದಲ್ಲಿ ಮೂಡುತ್ತಿತ್ತು. ಒಡನೆ ಗೌರಿ ನೆನಪಾದಳು.

ಹೌದು, ಅದೇಕೋ ಈಗೀಗ ಸಹ್ಯವಾಗುತ್ತಿರುವಳು ಆಕೆ. ನಮ್ಮ ಬಡಾವಣೆಗು, ಕಂಪನಿಗು ಮಧ್ಯದಲ್ಲಿ ಕೊಂಡಿಯ ಹಾಗಿರುವ ಜನತಾಬಜಾರ್‌ನಲ್ಲಿ ಅದೊಂದು ದಿನ ತನ್ನ ಬಾಸ್‌ನೊಟ್ಟಿಗೆ ಕಾರಿನಿಂದಿಳಿದ್ದಿದ್ದಳು ಗೌರಿ. ಅಂದೆ

ಮೊದಲ ಬಾರಿ ನಾನು ಆತನನ್ನು ನೋಡಿದ್ದು. ತುಂಬಾ ಹ್ಯಾಂಡ್‌ಸಮ್ ಆಗಿದ್ದ ಆತ ನಗುತ್ತ ಗೌರಿಯೊಡನೆ ಬರುತ್ತಿದ್ದ. ಅವರು ಅಲ್ಲಿ ಇದ್ದಷ್ಟು ಹೊತ್ತು ತುಂಬಾ ಸಹನೆಯಿಂದ ಗೌರಿಯನ್ನು ನೋಡಿದ್ದು ಅಂದೇ ಮೊದಲು. ಮುಖದ ತುಂಬಾ ನಗು ಹರಡಿಕೊಂಡೇ ಇದ್ದಳಾಕೆ. ಇಬ್ಬರು ಕೂಡಿ ಏನೇನೋ ಖರೀದಿ ಮಾಡಿ, ಹೋಗುವಾಗ ಹೊರಗೆ ನಿಂತಿದ್ದ ನನ್ನತ್ತ ಒಂದು ಕ್ಯಾಷುಯಲ್ ಸ್ಮೈಲ್ ಒಗೆದು ಹೋಗಿದ್ದಳು. ಅಚ್ಚರಿಯೆಂದರೆ ಅದುವರೆಗು ಆಕೇನ ಕಂಡಾಕ್ಷಣ ನನ್ನಲ್ಲಿ ಉಕ್ಕುತ್ತಿದ್ದ ತಿರಸ್ಕಾರ. ಉಪೇಕ್ಷೆ ಅಂದು ಮಾತ್ರ ಏಕೋ, ಎಲ್ಲೋ ಕಮರಿಹೋದಂತಿತ್ತು. ಒಂದು ಕಂಪನಿಯ ಬಾಸ್ ಆದವನು ತನ್ನ ಕೈಕೆಳಗಿನ ನೌಕರಳೊಡನೆ ಹೀಗೆ ವರ್ತಿಸಲು ಹೇಗೆ ಸಾಧ್ಯ........? ಹೀಗೆ ಸ್ನೇಹದಿಂದಿರಲು ಹೇಗೆ ಸಾಧ್ಯ........? ಅದೂ ಹೋಗಿ, ಹೋಗಿ ಗೌರಿ ಅಂತಹ ಹೆಣ್ಣಿನೊಡನೆ! ಏನಿದೆ ಅವಳಲ್ಲಿ......? ಅಲ್ಲಿ ಕೆಲಸ ಮಾಡುವ ಅನೇಕರ ಬಾಯಿಂದ ಅವನ ಶಿಸ್ತಿನ ಬಗ್ಗೆ, ಸಿಟ್ಟಿನ ಬಗ್ಗೆ ಕೇಳಿ ಗೊತ್ತಷ್ಟೆ. ಏನೋ ಮಂಕುತನ ಅಂದೆಲ್ಲ ನನ್ನನ್ನು ಕವಿದಿತ್ತು.

ಏನೋ ಮಾಡಲು ಹೋಗಿ ಏನೇನೋ ಮಾಡಿ ಮೊದಲ ಬಾರಿಗೆ ಅಂದು ರಾಜುವಿನ ಅಸಹನೆಗೆ ಗುರಿಯಾಗಿದ್ದೆ. "ಯಾಕಿಷ್ಟು absent minded.......?" ಎಂದಿದ್ದರು. ಹೌದು, ನನ್ನ ಮನಸ್ಸಿನ ಆ್ಯಬ್ಸೆನ್ಸು....... ಪ್ರೆಸೆನ್ಸು....... ವಿಪರೀತದ ಏರುಪೇರಿಗೆ ಗುರಿಯಾಗಿ ಔಟ್ ಆಫ್ ಕಂಟ್ರೋಲ್ ಆಗಿಹೋಗುತ್ತಿತ್ತು. ನನ್ನನ್ನು ಹೀಗೆ ಮಂಕು ಮಾಡುವ ಘಟನೆಗಳು ಘಟಿಸುತ್ತಲೇ ಇದ್ದವು ಆಗಾಗ. ಒಮ್ಮೆ ನಮ್ಮ ಹಿಂದಿನ ಬೀದಿಯ ಗಿರಿಜೆ ಸಿನಿಮಾ ಹಾಲ್‌ನಲ್ಲಿ ಆ ಬಾಸ್‌ನನ್ನು, ಅವನ ಹೆಂಡತಿಯನ್ನೂ ನನಗೆ ಪರಿಚಯಿಸಿದ್ದಳು. ನಾನು ಅದೆಷ್ಟು ಸವಿಯಾಗಿ, ಆತ್ಮೀಯವಾಗಿ ಮಾತನಾಡಿದ್ದೆ...... ಆದರೆ, ಮತ್ತೊಂದು ದಿನ ಗಂಡಹೆಂಡತಿ ಎದುರು ಸಿಕ್ಕಾಗ ನಾನು ಕೊಟ್ಟ ಸ್ಮೈಲ್‌ಗೆ ಯಾವ ಪ್ರತಿಕ್ರಿಯೆ ತೋರಿಸದೇ ಹೊರಟುಹೋಗಿದ್ದರಲ್ಲಾ.....? ನನ್ನ ಜೀವನದ ಪ್ರಥಮ ಅವಹೇಳನಕರ ಘಟನೆಯದು. ಹೌದು, ಇಡೀ ಬಡಾವಣೆ ನನ್ನ ಸ್ನೇಹಕ್ಕಾಗಿ ಹಾತೊರೆದು, ಕಾತರಿಸುತ್ತಿತ್ತು ಎಂದರೆ ಉತ್ಪ್ರೇಕ್ಷೆಯಲ್ಲ. ನಾನಿಲ್ಲದೆ ಈ ಬಡಾವಣೆಯ ಯಾವೊಂದು ಪೂಜೆ, ಸಮಾರಂಭವೂ ನಡೆದಿಲ್ಲ, ನಡೆಯುವುದಿಲ್ಲ. ನನ್ನ ಸಾತ್ವಿಕತೆ, ದೈವಭಕ್ತಿಯೂ ಅಷ್ಟೇ ಮೆಚ್ಚು. ನನ್ನ ಸ್ನೇಹಿತೆಯರೂ ಅಂತಹವರೆ. ವಿಭಿನ್ನಳಾಗಿದ್ದು, ಎಲ್ಲರ ಗಮನ ತನ್ನತ್ತ ಸೆಳೆಯುತ್ತಿದ್ದವಳೆಂದರೆ ಗೌರಿಯೆ. ಯಾವ ಪೂಜೆಯನ್ನೂ ಮಾಡಿದವಳಲ್ಲ, ಯಾರನ್ನೂ ಮನೆಗೆ ಕರೆದವಳಲ್ಲ. "ಅಯ್ಯೋ ತಿರುಗ್ಲಿಕ್ಕೆ ಆವಳಿಗೆ ಸಾಲ್ದು ಸಮಯ........" ಎಂದಾಕೆಯನ್ನು ಲೇವಡಿ ಮಾಡುತ್ತಿದ್ದರು ಹೆಂಗಸರೆಲ್ಲ. ಆದರೇನು? ಯಾರನ್ನೂ ಕೇರ್ ಮಾಡದ, ಯಾವುದನ್ನೂ ಹಚ್ಚಿಕೊಳ್ಳದ ಸ್ವಭಾವದವಳು ಆಕೆ. ಅದೇಕೋ ಇತ್ತಿತ್ಲಾಗೆ ಅವಳ ಬಗ್ಗೆ ಯೋಚಿಸುವುದು ಹೆಚ್ಚುತ್ತಿದೆ...... ಹಾಗವಳ ಕುರಿತ ಯೋಚಿಸಿದಂತೆಲ್ಲ

ನನ್ನ ಮನಸ್ಥಿತಿ ಏರುಪೇರಾಗುತ್ತದೆ. ಆಕೆಯ ಆ ನಗುವಂತೂ ನನ್ನನ್ನು ಅಸ್ಪಷ್ಟಗೊಳಿಸಿಬಿಡುತ್ತದೆ. ರಾಜುವೂ ಸದಾ "ಈಗೀಗ ನೀನ್ಯಾಕೆ ಒಂಥರ ಇರ್ತಿ.....? ಈ ಕ್ಷಣ ಇದ್ದಂಗೆ ಇನ್ನೊಂದು ಕ್ಷಣ ಇರೋಲ್ವಲ್ಲಾ......?" ಎನ್ನುತ್ತಿದ್ದರು. ನಿಜ ಹೇಳಬೇಕೆಂದರೆ ರಾಜುವಿಗೆ ಏನನ್ನೂ ಗಮನಿಸಲು ಸಮಯವಿಲ್ಲ. ತಾವಾಯ್ತು, ತಮ್ಮ ಕೆಲಸವಾಯ್ತು. ಅಂತಹ ಅವರ ಗಮನ ವನ್ನು ಸೆಳೆಯುವ ಮಟ್ಟಿಗೆ ನಾನು ಬದಲಾಗಿದ್ದೇನೆಯೆ? ಎಂದು ಒಳಗೊಳಗೆ ವಿಸ್ಮಯಗೊಳ್ಳುತ್ತೇನೆ ನಾನೆ. ಆದರೇನು, ಅವರನ್ನುವುದು ಸತ್ಯವೆ.

ಈ ಕ್ಷಣ ಆಕಾಶದಲ್ಲಿ ಹಾರುತ್ತಿರುವೆನೋ ಎಂಬಷ್ಟು ಹಗುರ ಎನಿಸುವ ಮನಸ್ಸು ಮರುಕ್ಷಣ ಆ ಆಕಾಶವೇ ಕಳಚಿ ಬಂದು ತಲೆಯ ಮೇಲೆ ಕೂತಿದೆಯೋ ಎಂಬಷ್ಟು ಭಾರ; ಈ ಕ್ಷಣ ಸುಖದ ಖಜಾನೆಯನ್ನೇ ಸೂರೆಗೊಂಡಂತಹ ಮೈಮನ ಬಿರಿಯುವ ಸಂಭ್ರಮ, ಸಂತೃಪ್ತಿ ಮರುಕ್ಷಣ. ಎಲ್ಲಾ ಕಳೆದುಹೋದಂತಹ ಖಾಲಿತನ, ಬೇಕುಬೇಕೆನ್ನುವ ತಹತಹ; ಏನೀ ವಿಚಿತ್ರ ಅವಸ್ಥೆ......? ನನ್ನ ಹಗಲುರಾತ್ರಿ ಕೊರೆಯುತ್ತಿದೆ ಈ ಪ್ರಶ್ನೆ. ಈ ಕ್ಷಣ ಸುಖ ಮರುಕ್ಷಣ ದುಃಖ; ಈ ಕ್ಷಣ ಅಳು ಮರುಕ್ಷಣ ನಗು; ಈ ಕ್ಷಣ ಎಲ್ಲಾ ಪಡೆದುಕೊಂಡ ಸಂತೃಪ್ತಿ ಮರುಕ್ಷಣ ಎಲ್ಲಾ ಕಳೆದುಕೊಂಡ ಅತೃಪ್ತಿ..... ಏನಿಲ್ಲ ನನಗೆ? ಒಳ್ಳೆಯತನಕ್ಕೆ ಮತ್ತೊಂದು ಹೆಸರೇ ಎನ್ನುವಂತಹ ವ್ಯಕ್ತಿತ್ವದ, ಸ್ಪುರದ್ರೂಪಿ ಗಂಡ, ಮುದ್ದಾದ ಮಗ, ಬಂಗಲೆ ಆಳುಕಾಳು, ಹೊರಗೆ ಸುತ್ತಲು ಬೇಕಾದ ವೆಹಿಕಲ್ಸುಗಳು....... ಏನಿಲ್ಲ? ಈ ಮನೇಲಿ ಪ್ರತಿಯೊಂದು ನಡೆವುದೇ ನನ್ನ ಆಜ್ಞೆಯಂತೆ. ನನ್ನ ಹೊರತು ನನ್ನ ಮೇಲೆ ಅಧಿಕಾರ ಚಲಾಯಿಸುವ ಮತ್ತೊಂದು ಪಿಳ್ಳೆ ಇಲ್ಲ. ರಾಜು ಸದಾ ತನ್ನ ಕೆಲಸದಲ್ಲೇ ಮಗ್ನ. ನಾನೆಲ್ಲಿ ಹೋದರೂ, ಏನೇ ಮಾಡಿದರೂ, ಏನೇ ಕೊಂಡರೂ, ಏಷ್ಟೇ ಕಳೆದರೂ ಯಾವುದನ್ನೂ ಕೇಳುವವ ರಲ್ಲ. ಒಟ್ನಲ್ಲಿ ಹೇಳಬೇಕೆಂದರೆ ನನ್ನ ತಂಟೆಗೇ ಬರುವವರಲ್ಲ. ಇದ್ದೊಬ್ಬ ಮಗನೂ ಸೈನಿಕ್ ಸ್ಕೂಲ್ ಸೇರಿದ ಮೇಲೆ ಪೂರ್ಣ ವಿರಾಮ. ಇಷ್ಟೆಲ್ಲ ಆರಾಮ, ಐಷಾರಾಮ, ಸ್ವಾತಂತ್ರ್ಯವಿದ್ದೂ ಈ fluctuating mood ನ ಹೊಸ ಸಮಸ್ಯೆ ಹುಟ್ಟಿ, ಕಾಡುತ್ತಿದೆ ನನ್ನನವರತ. ಈ ಮೊದಲು, ಹಿಂದೆಂದೂ ಹೀಗಾದ್ದು ನೆನಪಿಲ್ಲ. ಉಹೂಂ...... ಎಷ್ಟು ಕೆದಕಿದರೂ, ಎಷ್ಟು ಮೆಲುಕು ಹಾಕಿದರೂ ಹೀಗೆಂದೂ ಆದ ನೆನಪಿಲ್ಲ. ಹಾಗಾದರೆ ಅದೇಕೆ ದಿಢೀರನೆ ಶುರುವಾಯಿತೋ ಇದು......? ಅದ್ಹೇಗೆ ಶುರುವಾಯಿತೊ......? ಒಮ್ಮಿಂದೊಮ್ಮೆಲೆ ನನ್ನ ಭಾವ ನೆಗಳು ಇಷ್ಟೊಂದು ಏರುಪೇರಾಗಲು......; ಇಷ್ಟು ವರ್ಷಗಳೂ ಒಂದೇ ಸ್ತರದಲ್ಲಿದ್ದ ಈ ಬದುಕು ಹೀಗೆ ಒಮ್ಮಿಂದೊಮ್ಮೆಲೆ ಏರಿಳಿತ ಕಾಣಲು ಹೇಗೆ ಸಾಧ್ಯವಾಯ್ತು? ಆಳಕ್ಕೆ ಹೋದಂತೆ, ಹೋದಂತೆ ಅದು ಅಸಾಧ್ಯವೆನಿಸುತ್ತಿದೆ.

ಒಮ್ಮೆಂದೊಮ್ಮೆಲೆ ಹೀಗಾಗಲು ಸಾಧ್ಯವೇ ಇಲ್ಲ ಎನಿಸುತ್ತಿದೆ. ಎಲ್ಲೊ ಭೂಗರ್ಭದಲ್ಲಿ ತಣ್ಣಗೆ ಅಡಗಿ ಕುಳಿತಿರುವ ಲಾವಾರಸದಂತೆ ನನ್ನೊಳಗೇ ಸುಪ್ತವಾಗಿದ್ದ ಎಂಥದೋ ಆಸೆಗಳ, ನಿರಾಸೆಗಳ ತಾಕಲಾಟಗಳು ಹೀಗೆ, ಈಗ ಒಮ್ಮೆಂದೊಮ್ಮೆಲೆ ಜಾಗೃತಗೊಂಡಿರಬೇಕು....... ಹೌದು ! ನಿಜವೇ........ ಆದರೆ, ಎಂದಿನಿಂದ........? ಆಯಾಸವಾದಂತಾಗಿ ಕಣ್ಮುಚ್ಚಿ ಹಿಂದಕ್ಕೊರಗಿದೆ. ತಟ್ಟನೆ ಎದುರಾದಳು ಗೌರಿ. ಸದಾ ಎಣ್ಣೆ ಬಸಿಯುತ್ತಲೇ ಇರುವುದೋ ಎನಿಸುವ ಚರ್ಮದ, ಕಪ್ಪುವರ್ಣದ, ಸ್ಥೂಲ ಎನಿಸುವ ಕುಳ್ಳಗಿನ ದೇಹದ ಗೌರಿ ನನಗಿಂತಲೂ ಎರಡು ವರ್ಷಕ್ಕೆ ದೊಡ್ಡವಳೇ ಇರಬೇಕು. ನನಗಿಂತಲೂ ಮೊದಲೇ ಈ ಬಡಾವಣೆಯ ವಾಸಿ. ನಮ್ಮ ಮನೆಯಿಂದ ಆರನೆಯ ಮನೆಯೋ ಅವಳದು. ಇಡೀ ಬಡಾವಣೆಯ ಸ್ನೇಹವನ್ನು ಬಂದ ಹದಿನೈದು ದಿನದಲ್ಲೇ ಗಳಿಸಿದ್ದೆ ನಾನು. ಎಲ್ಲಾ ಸಂಪ್ರದಾಯಸ್ಥ ಕುಟುಂಬಗಳು. ಕಂಡ ಕ್ಷಣದಿಂದಲೇ ಅದೇಕೋ ಗೌರಿಯ ಬಗ್ಗೆ ತಿರಸ್ಕಾರ ಹುಟ್ಟಿ, ಬೆಳೆಯುತ್ತ ಹೋಗಿತ್ತು. ಮೊದಮೊದಲು ಆ ಹೆಣ್ಣಿನಲ್ಲಿ ಆಸಕ್ತಿಯೇ ಇರಲಿಲ್ಲ. ಆಕೆಯ ಸ್ನೇಹ ನೆನಸಿಕೊಳ್ಳಲೂ ಮುಜುಗರ ಎನಿಸುತ್ತಿತ್ತು. ಹತ್ತು ಜನರಲ್ಲಿ ಎದ್ದು ಕಾಣುವ ರೂಪದ, ಸದಾ ಮಾಡ್ ಆಗಿರಲು ಬಯಸುವ ನನಗೆ ಬಡಾವಣೆಗೆ ಅಂಟಿಕೊಂಡಿರುವ ಕಂಪನಿಯ ನೌಕರಳು ಗೌರಿ ಎಂದು ತಿಳಿದು, ಅವಳ ಗಂಡನೂ ಯಾವುದೋ ಕಚೇರಿಯ ಗುಮಾಸ್ತನು ಎಂದು ಗೊತ್ತಾದ ಮೇಲೆ ಅವಳಲ್ಲಿನ ಆಸಕ್ತಿ ಇನ್ನಷ್ಟು ಕ್ಷೀಣಿಸಿತ್ತು. ಯಾವಾಗಲೋ ಒಮ್ಮೊಮ್ಮೆ ಮಾತ್ರ ಎದುರು ಸಿಕ್ಕಾಗ ಒಂದು ಕಾಟಾಚಾರದ ಸ್ಮೈಲ್ ಕೊಡುವುದರಲ್ಲಿ ಬೇಸರವಾಗಿ ಹೋಗುತ್ತಿತ್ತು. ಈಗೊಂದು ಮೂರು ತಿಂಗಳಿಂದ ಆ ಕಂಪನಿಗೆ ಹೊಸ ಮ್ಯಾನೇಜರೂ, ಬಾಸೂ ಬಂದು, ಅವರುಗಳ ಆ ಕಂಪನಿಯ ಕ್ಯಾಂಪಸ್‌ನಲ್ಲಿ ವಾಸಿಸತೊಡಗಿ; ಅವರ, ಗೌರಿಯ ಒಡನಾಟ ಎಲ್ಲರ ಕಣ್ಣುಗಳನ್ನು ಚುಚ್ಚತೊಡಗಿದಂತೆ ನನಗೆ ಆಕೆಯ ಗಮನಿಸುವುದೇ ಕೆಲಸವಾಯ್ತು. ಒಮ್ಮೆ ಬಾಸ್, ಮತ್ತೊಮ್ಮೆ ಮ್ಯಾನೇಜರ್, ಕೆಲವೊಮ್ಮೆ ಬಾಸ್‌ನ ಹೆಂಡತಿ, ಅಪರೂಪಕ್ಕೊಮ್ಮೆ ಗಂಡ, ಮಕ್ಕಳೊಡನೆ ಮುಖದ ತುಂಬಾ ನಗು ಹರಿಡಿಕೊಂಡು ಸದಾ ಹೊರಗೆ ಸುತ್ತುವಾಗ; ಆ ನಗು ಕುರೂಪದ ಆ ಮುಖಕ್ಕೂ ಏನೋ ಒಂದು ಕಳೆ ನೀಡಿದೆಯೋ ಎನಿಸುತ್ತ ಕ್ರಮೇಣ ನಾನಾಕೆಯ ಸಮೀಪಿಸಲು ಪ್ರಯತ್ನಿಸತೊಡಗಿದ್ದೆ. ನನ್ನ ಕಾಟಾಚಾರದ ನಗೆಗೆ ಆತ್ಮೀಯತೆಯ ಲೇಪನ ಮಾಡಿ, ಮಾಡಿದ ಪ್ರಯತ್ನಕ್ಕೆ ಕೊನೆಗೂ ಫಲ ಸಿಕ್ಕಾಗ ಒಳಗೊಳಗೆ ಹರ್ಷಿಸಿದ್ದೆ.

ಆಗಲೇ ಈ ವಿವರಗಳನ್ನೆಲ್ಲ ಕಲೆ ಹಾಕಿದ್ದು. ಆ ಬಾಸ್‌ನ ಹೆಸರು ಮದನ್ ಎಂದೂ, ಮ್ಯಾನೇಜರ್ ರಾಮುವೆಂದೂ..... ರಾಮು ಈಕೆಯ ಬಾಲ್ಯ ಸ್ನೇಹಿತೆ ಲತಾಳ ಗಂಡನೆಂದೂ....... ಈ ನಾಲ್ವರೆ ಅವಳಿಗೆ ಮಿತ್ರರೆಂದೂ ಕಂಪನಿಯಲ್ಲಿ ಅವರಿಬ್ಬರು ಈಕೆಗೆ ಮೇಲಾಧಿಕಾರಿಗಳು ಮಾತ್ರ. ಎಂದೂ ಪರಸ್ಪರ ಸ್ನೇಹಿತರೆಂದು ತೋರಿಸಿಕೊಳ್ಳುವುದಿಲ್ಲ ಅಲ್ಲಿ. ಆದರೆ ಒಮ್ಮೆ ವರ್ಕಿಂಗ್ ಹವರ್ಸ್

ಮುಗಿಯಿತೆಂದರೆ ಅವರೆಲ್ಲ ಮಿತ್ರರಂತೆ ಕೇವಲ ಮಿತ್ರರು ಬೇರೇನೂ ಅಲ್ಲ ವಂತೆ........... ಕಿಲಕಿಲನೆ ನಗುತ್ತಾ ಹೇಳುತ್ತಿದ್ದಳು. ಮದನ್ ಸೌತೂ ಅವನ ಹೆಂಡತಿ ಸುಪ್ರೀತ ಸಾತರ್ೂ....... ಆಕೆಗೆ ಹಿಂದಿ, ಇಂಗ್ಲಿಷ್ ಹೊರತು ಬೇರೆ ಭಾಷೆಯ ಗಂಧವಿರಲಿಲ್ಲವಂತೆ. ಹೀಗಾಗಿ ಅವರುಗಳು ಇನ್ನಷ್ಟು ಕ್ಲೋಸಂತೆ....... ತನ್ನ ಸ್ನೇಹಿತರ ಕುರಿತು ಮಾತಾಡುತ್ತ, ಮಾತಾಡುತ್ತ ಅದೆಷ್ಟು ಭಾವುಕಳಾಗು ತ್ತಿದ್ದಳವಳು........? ಅವರ ಬಗ್ಗೆ ಮಾತಾಡುವ ಹೊತ್ತಿಗೇ ಕಂಗಳಲ್ಲಿ ಮಿಂಚು ಮೂಡುತ್ತಿತ್ತು. ಆದರೆ, ನನ್ನ ಕಣ್ಗಳಲ್ಲಿ ಅದೇನು ಕಂಡಳೋ ಒಡನೆ ಹೇಳಿದ್ದಳು "ನಿಮ್ಗೂ ಅವರ್ನ ಪರಿಚಯಿಸ್ತಿನಿ ಇರಿ......." ಎಂದು. ಆದರೆ, ತನ್ನ ಬಾಯಿಂ ದಲೇ ಅವರನ್ನು ಸಾಕಷ್ಟು ಪರಿಚಯಿಸಿದ್ದಳು. ನಾನು ಆಕೇನ ಸಹಿಸಿಕೊಳ್ಳುವು ದನ್ನು ರೂಢಿಸಿಕೊಳ್ಳತೊಡಗಿದೆ. ಅದರ ಪರಿಣಾಮವೋ ಎಂಬಂತೆ ಇನ್ನಷ್ಟು ವಿವರಗಳು ಸಿಕ್ಕವು. ಮದನ್ ತುಂಬಾ sportive, very friendly; ಆದರೆ ಸುಪ್ರೀತ ಸ್ವಲ್ಪ ಮೂಡಿ; ಬಾಯಿನೂ ಅಷ್ಟೇ ಜೋರೇ. ಕೆಲವೊಮ್ಮೆ ಮದನ್ ತೀರ ಒರಟನಂತೆ ವರ್ತಿಸುತ್ತ ಸುಪ್ರೀತಳನ್ನು ರೇಗಿಸಿ, ಅಳಿಸುತ್ತಿದ್ದು, ಅವರ ಆ ಕಲಹಕ್ಕೆ ತನ್ನನ್ನು ಮಧ್ಯಕ್ಕೆ ಸಿಕ್ಕಿಸಿಕೊಳ್ಳುತ್ತಿದ್ದುದೂ........; ರಾಮು ಎಷ್ಟು ಧಾರಾಳಿಯೋ ಲತಳಷ್ಟೇ ಜಿಪುಣಿಯಾದರೂ ಅವರ ಪ್ರೇಮಕಲಹ ನೋಡಲೇ ಒಂದು ಚಂದವಂತೆ..... ಇತ್ಯಾದಿ......., ಇತ್ಯಾದಿ......

ಇಷ್ಟೆಲ್ಲ ಮಾತಾಡಿಕೊಳ್ಳುವ ಹೊತ್ತಿಗೆ ಗೌರಿ ನಮ್ಮನೆಗೆ ತೀರ ಪರಿಚಿತಳಾಗಿ, ಆತ್ಮೀಯಳಂತೆ ತಿನ್ನುವುದು, ಉಣ್ಣುವುದು ಮಾಡುತ್ತ ಕೆಲವೊಮ್ಮೆ ನನ್ನ ಬಲವಂತಕ್ಕೆ ನನ್ನ ಒಡವೆ, ವಸ್ತ್ರಗಳನ್ನೂ ಧರಿಸುತ್ತ ಸಂಪೂರ್ಣ ನನ್ನ ವಿಶ್ವಾಸಕ್ಕೆ ಸಿಕ್ಕಿಕೊಂಡಿದ್ದಳು. ಇಷ್ಟಾದರೂ ಊಟಿಗೆ ಹೋಗುವುದನ್ನು ಅದ್ಹೇಗೆ ಹೇಳಲು ಮರೆತಳೊ.......? ನಾನು ತಲೆ ಕೆಡಿಸಿಕೊಂಡು ಒದ್ದಾಡುತ್ತಿರುವಾಗಲೇ ಪ್ರತ್ಯ ಕ್ಷಳಾದಳು ಮುಂಬಾಗಿಲಲ್ಲಿ ನಗುತ್ತ. ಆಕೇನ ನೋಡಿದ ಗಳಿಗೆಯೇ ನನ್ನೆಲ್ಲ ಸಂಕಟ, ಆಲಸ್ಯ, ಚಿಂತೆ ಮಂಗಮಾಯವಾಗಿ ನನಗರಿವಿಲ್ಲದೆಯೇ ದನಿಯಲ್ಲಿ ಸಂಭ್ರಮ; ನನ್ನೊಳಗೇ ಸಂತಸದ ಅಲೆಯುಕ್ಕಿ ಬರುತ್ತಿರುವಂತೆ ಇತ್ತು. ಆದರದು ಕ್ಷಣಿಕ. ಇರುವಷ್ಟು ಹೊತ್ತು ಊಟಿಯನ್ನೇ ಮಾತಾಡುತ್ತ, ಊಟಿಯನ್ನೇ ಉಸಿರಾಡುತ್ತ ಉತ್ಸಾಹದ ಚಿಲುಮೆಯಂತೆ ಚಿಮ್ಮುತ್ತಿದ್ದ ಆಕೆಯನ್ನ ನೋಡುತ್ತ, ಕೇಳುತ್ತ ನನ್ನ ತಲೆ ಸಿಡಿಯತೊಡಗಿತು. ನಾನು ಒಳಗೊಳಗೆ ಮುದುಡತೊಡ ಗಿದೆ. ಇದೊಂದೂ ಗೌರಿಗೆ ತಿಳಿಯದು. ನನ್ನ ಒಳಗು ಅವಳಿಗೆ ಅರ್ಥವಾಗದು. ಅಂತೆಯೇ ಒಂದು ಸಂಜೆ ಸುಪ್ರೀತಳ ಮನೆಗೆ ನನ್ನ ಕರೆದೊಯ್ದೆಬಿಟ್ಟಳು. ನಾನು, ಸುಪ್ರೀತ ಒಳಗೆ ಮಾತಾಡುತ್ತಿರುವಾಗ ಆಕೆ ಹೊರಗೆ ರಾಮು, ಮದನ್‌ರೊಟ್ಟಿಗೆ ಮಾತಾಡುತ್ತ, ನಗುತ್ತಲಿದ್ದಳು. ಎಂತಹ ಸುಖವಾದ, ಸಮೃದ್ಧವಾದ ನಗೆ ಆಕೆಯದು.......! ನಾನೂ ಆಕೆಯಂತೆ ನಗಬೇಕೆಂದು ಎಷ್ಟೇ ಪ್ರಯತ್ನಿಸಿದರೂ ಕೇವಲ ಸಪ್ಪಗಿನ, ನೀರಸ ನಗೆಯೇ ನನ್ನ ತುಟಿಗಳಲ್ಲಿ ಹೊಮ್ಮುತ್ತಿದ್ದುದು. ಅವಳ

ಆ ನಗು ಕೇಳಿದಂತೆಲ್ಲ ಒಂದು ತೆರನ ಅಭದ್ರತೆ; ಅಸ್ಥಿರತೆಯಿಂದ ತಳಮಳಗೊಳ್ಳುತ್ತ ಹೋದೆ ನಾನು. ನನ್ನ ಈ ತಳಮಳ ಹೆಚ್ಚಿದಂತೆಲ್ಲ ಸುಪ್ರೀತಳಿಗೆ ಸಮೀಪಳಾಗುತ್ತ ಹೋದೆ. ಆತ್ಮೀಯತೆಯ ಪರಾಕಾಷ್ಠೆಯಲ್ಲಿ ಒಮ್ಮೆ "ನೀವು ಯಾವಾಗ್ಲು ಹೇಗೆ ನಗ್ತಾ..... ಎಷ್ಟು ಫ್ರೆಂಡ್ಲಿಯಾಗಿ ಇರ್ತಿರಲ್ಲಾ......? ಆದ್ರೆ ಗೌರಿ ನೀವು ತುಂಬಾ ಮೂಡಿ.......... ತುಂಬಾ ಜೋರೂ..... ಅಂತೆಲ್ಲ ಹೇಳಿದ್ಲು. ಬಟ್, ಖಂಡಿತ ನೀವು ಹಾಗನ್ಸಲ್ಲಪ್ಪ......." ಎಂದೂ; ಇನ್ನೊಮ್ಮೆ "ಮದನ್ ನೋಡ್ಲಿಕ್ಕೆ ಎಷ್ಟು mild ಅನ್ನಿಸ್ತಾರಲ್ವಾ.....?" ಎಂದ ನನ್ನ ಮಾತಿಗೆ ಸುಪ್ರೀತ ಸೋಜಿಗಳಾಗಿ "ಅದೇನು ಅನ್ನಿಸೋದು.......? ಅವ್ರು ಯಾವಾಗ್ಲು ಮೈಲ್ಡೇ......." ಎಂದಾಗ ನಾನು ತುಂಬಾ ಕ್ಯಾಷುಯಲಾಗಿ "ಛೆ, ಛೆ, ನನಗೇನು ಗೊತ್ತೇಳಿ ನಿಮ್ಮ ಬಗ್ಗೆ.....? ಗೌರಿ ಹಾಗಂತಿದ್ಲು ಮದನ್ ತುಂಬಾ ಒರಟೂ, ಸುಪ್ರೀತನ್ನ ಆಳಿಸ್ತಾನೇ ಇರ್ತಾರೆ.... ಅಂತ" ಎಂದೂ; ಮತ್ತೊಮ್ಮೆ "ನೀವಿಬ್ರು ಒಳ್ಳೆ ಫ್ರೆಂಡ್ಸ್ ತರಹ ಇದೀರಪ್ಪ ಒಮ್ಮೆನೂ ಕಿತ್ತಾಡಿದ್ದು ನೋಡ್ಲೆ ಇಲ್ಲ......." ನಾನಂದಾಗ ಸುಪ್ರೀತ ಬೆರಗಾಗಿ, ನಗುತ್ತ ಕೇಳಿದ್ದಳು "ನಿಮ್ಗೆ ಹಾಗೆ ಕಿತ್ತಾಡ್ತ ಇದ್ರೆ ಇಷ್ಟನಾ.....?" ನಾನಾಗ ತುಂಬಾ ಇನ್ನೊಸೆಂಟಾಗಿ "ಅಯ್ಯಯ್ಯೊ ಇಲ್ಲಪ್ಪ. ಗೌರಿ ಹೇಳ್ತಿದ್ಲು ನಂಗೆ ಅವರಿಬ್ಬರ ಜಗಳ ಬಿಡಿಸೋದೇ ಕೆಲ್ಸ ಅಂತ ಅದಕ್ಕೆ......." ಎಂದಿದ್ದೆ.

ರಾಜೂ ಅಂತೂ ಮೊನ್ನೆ ಕೇಳಿಯೇ ಬಿಟ್ಟರು "ಏನು ತುಂಬಾ ಖುಷಿ ಈಗೀಗ.......?" ಅಂತ. ನನ್ನ ನಗುವೇ ಅವರಿಗುತ್ತರ. "ಎಲ್ಲಿ ಗೌರಿ ಕಾಣ್ತಿಲ್ಲ......." ಎಂದು ಕೇಳುವುದನ್ನೂ ಮರೀಲಿಲ್ಲ ಅವರು. ನಾವು ಅಸಡ್ಡೆಯಿಂದ "ಅಯ್ಯ ಯಾರಿಗ್ಗೊತ್ತ್ರೀ......?" ಎಂದಿದ್ದೆ. ಹೌದು, ನಾನೂ ಆಕೇನ ನೋಡಿ ಬಹಳ ದಿನಗಳೇ ಆಗಿದ್ದವು. ನಾನಾದರೂ ಅವಳನ್ಯಾಕೆ ಗಮನಿಸಲು ಹೋಗಲಿ........? ಸುಪ್ರೀತಳ ಜತೇಲಿ ಸಿಟಿಗೊ.......... ಸಿನಿಮಾಗೋ ಇಲ್ಲ ಅವಳ ಮನೆಗೋ ಹೋಗುತ್ತ; ಅವರಿಬ್ಬರನ್ನು ನಮ್ಮನೆಗೆ ಆಹ್ವಾನಿಸುತ್ತ ಅವರಿಗೆ ತಿಂಡಿಯೋ, ಊಟವೋ ಸಿದ್ಧಗೊಳಿಸುತ್ತ........ ಹೀಗೆ ನಾನಂತೂ ಸದಾ ಬ್ಯುಸಿ. ಮೊದಲಿನ ಹಾಗೆ ಗೌರೀನ entertain ಮಾಡೋಕು ಆಗೋಲ್ಲ. ಅದೇಕೋ ಮತ್ತೆ ಮೊದಲಿನ ಅದೇ ತಿರಸ್ಕಾರ, ಉಪೇಕ್ಷೆ ಆಕೇನ ನೋಡಿದೊಡನೆ ನನ್ನೆಲ್ಲ ಪ್ರಯತ್ನ ಮೀರಿ ಚಿಮ್ಮಿ ಚೆಲ್ಲುತ್ತದೆ. ಹಿಂದಿನ ಅದೇ ನಗು ಕಾಟಾಚಾರಕ್ಕೆ ಅರುಳುತ್ತದೆ. ಈಗೀಗ ರಾಮು, ಮದನ್ ಅವರೊಟ್ಟಿಗೂ ಕಾಣುತ್ತಿಲ್ಲ ಅವಳು. ಮೊದಲಿನಂತಿಲ್ಲದೆ ಯಾಕೋ ಡಲ್ಲಾಗಿರುವಳು ಎಂದು ಕಂಡವರು ಹೇಳುವುದನ್ನು ಕೇಳಿದ್ದೇನೆ. ವೈಮನಸ್ಸೆಲ್ಲ ಒಮ್ಮೆಲೇ ಹಗುರಾಗಿ, ಹಾಯೆನಿಸುತ್ತಿದೆ....... ಸ್ಥಿರತೆ, ಭದ್ರತೆ ಮೆಲ್ಲನೆ ನನ್ನನ್ನು ಆಕ್ರಮಿಸುತ್ತಿವೆ......... ಬತ್ತಿದ್ದ ಜೀವಸೆಲೆಯು ಚಿಗುರಿಗೆ ಸಾಕ್ಷಿಯೋ ಎಂಬಂತೆ ಹಿಂದೆ ನನ್ನ ಮನಸ್ಥಿತಿಯನ್ನೆ, ನನ್ನ ಬದುಕನ್ನೆ ಏರುಪೇರಾಗಿಸಿದ್ದ ಅದೇ ಆ ನಗು.......; ನನ್ನ ಜೀವನವೇ ಅರ್ಥರಹಿತ ಎಂಬ

ಭಾವನೆಯುನ್ನು ಹುಟ್ಟುಹಾಕುತ್ತ........ ನನ್ನೆಲ್ಲ ಸುಖ, ಸಂಪತ್ತು ನಿರರ್ಥಕ......... ನನ್ನ ಅಸ್ತಿತ್ವವೇ ನಿರರ್ಥಕ ಎಂಬ ಭಾವನೆಯುನ್ನು ಬೆಳಸಿ, ಬೀಗುತ್ತಿದ್ದ ಅದೇ ಆ ನಗುವಿಂದು ನನ್ನೀ ಅಧರಗಳಲ್ಲಿ ಅರಳುತ್ತಿದೆ. ಈ ಸಂಭ್ರಮದ ನಡುವೆಯೇ...... ಹೌದು, ಈ ನಡುವೆಯೇ ಒಂದೆರಡು ಬಾರಿ ಮನೆಬಾಗಿಲಿಗೆ ಬಂದಿದ್ದ ಗೌರಿಯುನ್ನು ಒಳಗೂ ಕರಿಯದೆ ಹೊರಗೆ ಮಾತನಾಡಿಸಿ ಕಳುಹಿಸಿದ್ದೆ. ಆದರೂ ಮೊನ್ನೆ ಒಮ್ಮೆ ಬಂದಿದ್ದಳು. ತಾನು ಆರ್.ಸಿ.ಪುರದ ಕಂಪನಿಯ ಬ್ರಾಂಚ್‌ಗೆ ಟ್ರಾನ್ಸ್‌ಫರ್‌ಗೆ ಪ್ರಯತ್ನಿಸುತ್ತಿರುವುದಾಗಿ ತಿಳಿಸಿದಳು. ನಾನು ಹೆಚ್ಚು ಕೆದಕದೇ ಕಳುಹಿಸಿದ್ದೆ. ಮನೆಯ ಪಕ್ಕದಲ್ಲಿರುವ ಕಂಪನಿ ಬಿಟ್ಟು ಇಲ್ಲಿಂದ ಇಪ್ಪತ್ತೊ, ಇಪ್ಪತ್ತೈದೋ ಮೈಲು ದೂರದಲ್ಲಿರುವ ಬ್ರಾಂಚ್‌ಗೆ ತಾನಾಗಿ ಹೋಗಲು ಬಯಸುತ್ತೇನೆ ಎಂದಾಕೆ ಹೇಳಿದರೆ ನಂಬಲು ನನಗೇನು ಲೂಸೇ......? ಎಲ್ಲೊ ಮದನ್ ಇಲ್ಲಿಂದ ಕಿತ್ತು ಹಾಕ್ತಿರ್ಬೇಕು.... ಹಾಗೆ ಹೇಳ್ಕೊಳೋಕೆ ಅವಳಿಗೆ ಅವಮಾನವಲ್ದೆ ಮತ್ತೇನು.....? ಅರೆ! ಮರೆತ್ತಿತ್ತು ಇಂದೇ ಅವಳ ವರ್ಗಾವಣೆಯುನ್ನು ನಿರ್ಣಯಿಸುವ ದಿನ. ಸುಪ್ರೀತ ಮೊನ್ನೆ ಹೇಳಿದ್ದಳಲ್ಲವೆ........? ಏಕೋ ನಗು ಬಂತು. ಮೈಮನ ಹತ್ತಿಯಂತೆ ಹಗುರಾಗಿ, ತಂಗಾಳಿಯ ಗತಿಯಲ್ಲಿ, ಹಕ್ಕಿಯಂತೆ ಹಾಯಾಗಿ ವಿಹರಿಸುತ್ತಿರುವಂತೆ ಗೌರಿಯುನ್ನು ತಲೆಯಿಂದ ಝಾಡಿಸಿ ಸುಪ್ರೀತಳ ಮನೆಗೆ ಹೋಗಲು ತಯಾರಿ ನಡೆಸತೊಡಗಿದೆ. ಅಷ್ಟರಲ್ಲಿ ಕಾರಿನ ಹಾರ್ನ್ ಕೇಳಿಸಿ ಅಚ್ಚರಿಯಿಂದ ಕಿಟಕಿಯಲ್ಲಿ ಇಣುಕಿದೆ. ಅದೇನು.......? ನಂಬಲೇ ಆಗುತ್ತಿಲ್ಲ. ಮದನ್‌ರ ಕಾರು ಗೌರಿಯ ಮನೆಯ ಮುಂದೆ ನಿಂತಿದೆ? ಕಣ್ಣಗಲಿಸಿ ನಿಂತೆ. ಹೌದು......, ಅನುಮಾನವೇ ಇಲ್ಲ ಕೆಳಗೆ ಇಳಿಯುತ್ತಿರುವುದು ರಾಮು, ಮದನ್, ಲತ ಮತ್ತು ಸುಪ್ರೀತ. ನಾಲ್ವರು ಗೌರಿಯ ಮನೆ ಪ್ರವೇಶಿಸಿದಂತೆಯೇ ಮುಂಬಾಗಿಲು ಮುಚ್ಚಿಕೊಂಡಿತು. ದುಃಸ್ವಪ್ನ ಕಂಡಂತೆ ಬೆಚ್ಚಿ ಬಿದ್ದೆ. ಇದೇನಿದೂ......? ಇದ್ದಕ್ಕಿದ್ದಂತೆ ಏನಾಗುತ್ತಿದೇ.......? ಸುಪ್ರೀತ ಶಾಪಿಂಗ್‌ಗೆ ಹೋಗಲು ಸಂಜೆ ನನ್ನ ಬರಹೇಳಿದ್ದು ಮರೆತಳೇ......? ಹತ್ತು ನಿಮಿಷಗಳಾದರೂ ಯಾರ ಸುಳಿವೂ ಇಲ್ಲವಲ್ಲಾ......... ತಲೆಯ ನರಗಳು ಸೇದತೊಡಗಿದವು. ಎಷ್ಟೇ ಅದುಮಿ ಹಿಡಿದು ನಿಂತರೂ, ಕೂತರೂ ತೊಡೆಗಳು ಕಂಪಿಸತೊಡಗಿದವು. ಚಡಪಡಿಕೆ ಹೆಚ್ಚಾದಂತೆ ಹೊರಕ್ಕೂ, ಒಳಕ್ಕೂ ಓಡಾಡತೊಡಗಿದೆ. ಅರ್ಧ ಗಂಟೆಯಾದರೂ ಯಾವ ಸೂಚನೆಯೇ ಇಲ್ಲ. ನನ್ನೊಳಗೆ ಯಾವುದೋ ಜ್ವಾಲಾಗ್ನಿ ಸ್ಫೋಟಗೊಳ್ಳಲು ಕಾತರಿಸುತ್ತಿದೆಯೋ ಎನಿಸತೊಡಗಿ; ಒಳಗೆಲ್ಲ ಧಗೆ ಹೆಚ್ಚಿ, ಮುಚ್ಚಿದ್ದ ಕಿಟಕಿಗಳನ್ನೆಲ್ಲಾ ತೆರೆದು ದೇಹವನ್ನು ಸರಳಿಗಾನಿಸಿ ನಿಂತೆ. ಛೆ, ಈ ಸುಪ್ರೀತಳೇಕೆ ಹೀಗೆ ಮಾಡಿದಳು.......? ನಾನಿಲ್ಲಿ ಆಕೆಗಾಗಿ ಸಿದ್ಧಳಾಗಿ ನಿಂತಿರುವ ಜ್ಞಾನವಾದರೂ ಬೇಡವೇ.....? ಏನೆಂದು ತಿಳಿದಿರುವಳೀಕೆ ನನ್ನನ್ನು.......? ಇಲ್ಲಿಯೇ ಪಕ್ಕದಲ್ಲಿ ಬಂದು atleast ಹೇಳಿ ಕಳುಹಿಸುವಷ್ಟು ಇಲ್ಲವೇ ಮನೆಯಿಂದಲೇ ಇಂದು ಬರಲಾಗದು ಎಂದು ರಿಂಗ್ ಕೊಡುವಷ್ಟು ಸೌಜನ್ಯವಿಲ್ಲವೇ ಈಕೆಗೇ......? ನನ್ನ

ಮನಸ್ಸು ಕುದಿಯುತ್ತಿದೆ....... ಎದೆಯೊಳಗೆಲ್ಲಾ ಸೇದಿದಂತಾಗುತ್ತಿದೆ......... ಕತ್ತಲೂ ಎಲ್ಲೆಡೆ ಆವರಿಸಿಕೊಳ್ಳುತ್ತಿದೆ......... ನೋಟವನ್ನು ಆಗಸಕ್ಕೆ ಸರಿಸಿದೆ. ಎಲ್ಲವೂ ಮಂಕೂ ಮಂಕು; ಎಲ್ಲಾ ಅಸ್ಪಷ್ಟ. ತಟ್ಟನೆ ಗೌರಿಯ ಮನೆಯ ಮುಂಬಾಗಿಲು ತೆರೆದು ಎಲ್ಲರೂ ಹೊರಬಂದರು. ನಾನೇನು ಮಾಡುತ್ತಿದ್ದೇನೆ ಎಂಬ ಅರಿವೇ ನನಗಿರಲಿಲ್ಲ. ಒಂದೇ ಉಸಿರಿಗೆ ಮಹಡಿ ಮೆಟ್ಟಲನ್ನು ದಡದಡನೆ ಇಳಿದು, ಬಾಣದಂತೆ ಹೊರಕ್ಕೆ ಚಿಮ್ಮಿದೆ. ಅಷ್ಟರಲ್ಲಿ ಕಾರು ನಮ್ಮನೆಯುನ್ನು ಹಾಯ್ದಿತ್ತು. ಬವಳಿ ಬಂದಂತಾಗಿ ಕಣ್ಮುಚ್ಚಿ ಬಾಗಿಲಿಗೇ ಕುಸಿದೆ. ಗೇಟು ಶಬ್ದವಾದಾಗಲೇ ಎಚ್ಚರ. ಬೆಚ್ಚಿ, ಬೆದರಿ ಕಣ್ತೆರೆದೆ. ಗೌರಿ.........! ಎದುರಿಗೇ ನಿಂತಿದ್ದಾಳೆ ನಗುತ್ತಾ.......

***

# ಬಸವಿ

ರಾತ್ರೋರಾತ್ರಿ ಮಗಳು ದೇವೀರಿಯೊಡನೆ ಸೂರೇನಳ್ಳಿ ಪ್ರವೇಶಿಸಿದಳು ಶಾಂತವ್ವ. ಹಟ್ಟಿಯೊಳಕ್ಕೆ ಕಾಲಿಟ್ಟ ಘಳಿಗೆಯೇ ಹುಯಿಲಿಟ್ಟವು ನಾಯಿಗಳು. ನಿದ್ದೆಗಣ್ಣನ್ನು ಹೊಸುಕುತ್ತಲೇ ಕುತೂಹಲದಿಂದ ನೆರಕೆಯು ಹೊರಕ್ಕೆ ಕಣ್ಣು ನೆಟ್ಟು ನಿಂತಿತ್ತು ಇಡೀ ಹಟ್ಟಿ. ಬಾಗಿಲು ಸರಿಸಿ ಆಶ್ಚರ್ಯದಿಂದ ಬಾಯಗಲಿಸಿ ನಿಂತ ದ್ಯಾಮಯ್ಯ ಹೊರಗೆ ನಿಂತಿದ್ದ ತಂಗಿಯನ್ನು, ಆಕೆಯ ಮಗಳನ್ನು ನೋಡಿದ. ಅವ್ವನಿಗಿಂತಲೂ ಎತ್ತರಕ್ಕೆ ಬೆಳೆದುನಿಂತಿದ್ದ ಸೊಂಪಾದ ಚೆಲುವಿನ ಖನಿ ಸೊಸೆ ದೇವೀರಿಯನ್ನು ನೋಡಿಯೇ ಈ ಹೊತ್ತಿನಲ್ಲಿ ಅವರುಗಳು ಬಂದಿರುವ ಕಾರಣವನ್ನು ಊಹಿಸಿದ ದ್ಯಾಮಯ್ಯ, ಮಗಳು ಲಕ್ಷ್ಮಿಗೆ ಒಲೆ ಅಂಟಿಸಿ ಎಸರಿಡಲು ಹೇಳಿ ತಾನು ತಂಗಿಯ ಮುಂದೆ ಕುಳಿತ. "ನಿಮ್ಮಾವ ಸತ್ತಿದ್ದೆ ತಡ, ನಾನೆಷ್ಟು ಬಡ್ಕಂಡ್ರೂ ಕಿವಿಗಾಕೆಣ್ದಂಗೆ ಸಣ್ಣಪ್ಪುಗಳೆಲ್ಲ ಸೇರ್ಕ್ಕೊಂಡು ಈ ಹುಡ್ಗಿಗೆ ಮುತ್ತು ಕಟ್ಟಿಸಿ, ಬಸವಿ ಮಾಡಿದ್ರು. ಇದಕ್ಕೊ ಬರೇ ಓದಾ ಹುಚ್ಚು. ಹೆಂಗೊ ಹಂಗಿಂಗೆ ಏಳ್ನೆ ಕಲಾಸು ಪಾಸು ಮಾಡಿದ್ದೆ ಹೆಬ್ಬಾತು. ಆಟೊತ್ಗ ಏನು ಅರೀದ ಹುಡ್ಗಿ ಕತ್ತು ಕೊಯ್ದುಬಿಟ್ರು.... ನಿಮ್ಮಾವ ಬದ್ಕಿದ್ರೆ ಆ ಮಾತು ಬ್ಯಾರೆ ಇತ್ತಿಬಿಡು. ನಾನೊಬ್ಬೆ ಹೆಣ್ಣೆಂಗ್ಸು ಏನ್ಮಾಡ್ಲಿ? ಹೊರಗ್ನೋರ್ದು ಬಿಡು, ಸ್ವಂತ ಸಣ್ಣಪ್ಪುಗಳೇ ತಮ್ಮ ತೀಟೆತೆವಲುಗಳಿಗೆ ಈ ಹುಡ್ಗಿನ ಮಾರಾಟ ಮಾಡಕೆ ನೋಡಿದ್ರೆ ನನಗ್ಯಾರೆ ದಾರಿ ಏನಣ್ಣಾ....? ಅದ್ಕೆಯ ರಾತ್ರೋರಾತ್ರಿ ಯಾವನ್ಗೂ ಹೇಳ್ದಂಗೆ ಕೇಳ್ದಂಗೆ ಹುಡ್ಗಿನ್ಕರ್ಕಂಡು ಆದೇ ಓಡ್ಬಂದೆ...." ಬಿಕ್ಕಿಬಿಕ್ಕಿ ಅಳುತ್ತಾ ಶಾಂತವ್ವ ವಿವರಣೆ ನೀಡಿದಾಗ ದ್ಯಾಮಯ್ಯ ನಿಟ್ಟುಸಿರಿಸಿಟ್ಟ. "ಅದ್ಸರಿಯವ್ವಾ... ಆದ್ರೆ, ಈ ಊರಿನ ಜನವಾದ್ರು ಯಾವ ಗನಸ್ತು ಹೇಳೂ....? ನಮ್ಮಟ್ಟಿ ಹೆಣ್ಮಕ್ಳು ಮೈನೆರೆಯದೇ

ಕಾಯ್ಕಂಡಿರ್‍ತಾವೆ ನಾಯಿಗಳು... ಅದ್ರಾಗು ಇಂತಹ ಹೆಣ್ಣು ಕಟ್ಕಂಡು ಎಲ್ಹೋದ್ರು ತಂಟೆ ತಪ್ಪಿದ್ದಲ್ಲ ಬಿಡೂ. ಏನೋ ನಮ್ಮಟ್ಟಿವೊ ಇಲ್ಲ ಪಕ್ಕದೂರ್ ಹಟ್ಟಿವೊ ಯಾರನ ಹುಡ್ಗ ಸಿಕ್ರೆ ಅತ್ಲಾಗೆ ಲಗ್ನ ಮಾಡ್ಬಿಡಾದು ಅಷ್ಟೆ...."

ಬಾಯಲ್ಲಿ ಹಾಗೆ ನುಡಿದರೂ ಮನದಲ್ಲಿ ಶಂಕೆ ತಪ್ಪದು. ಈ ಊರ್‍ನಾಗೆ ಅವನು ಇರತೊಡಗಿ ಇಪ್ಪತ್ತು ವರ್ಷ. ಅದ್ಯಾಕೋ ದೇವೀರಿ ನೋಡ್ದಾಗಿಂದ ಕಣ್ಣಿಗೆ ನಿದ್ದೆ ಹತ್ತವಲ್ದು. ಕಣ್ಮುಚ್ಚಿದರೇ ಸಾಕು ಚೇರ್ಮನ್ ಶನಿದೇವಯ್ಯ, ಅವನ ಮಕ್ಕಳು ಮರಿಯ, ಮಾದೇವ ಕಣ್ಮುಂದೆ ಬರುತ್ತಿದ್ದರು. ಹೆಸರಿಗೆ ತಕ್ಕಂತೆ ಈ ಊರಿಗೆ ಶನಿಯೇ ಅವ್ನು. ಲಂಪಟತನ, ದುರಳತನದ ಪ್ರತೀಕ. ಅವನಿಗೆ ಬಲಿಯಾದ ಈ ಹಟ್ಟಿಯ ಹೆಣ್ಣುಗಳ ಲೆಕ್ಕವಿಟ್ಟವರ್‍ಯಾರು? ಅವನ ಕಣ್ಣು ಬಿದ್ದ ಹೆಣ್ಣು ತಪ್ಪಿಸಿಕೊಳ್ಳುವುದು ಅಸಾಧ್ಯದ ಮಾತು. ಇತ್ತೀಚೆಗೆ ಅವನ ಪಡಿಯಚ್ಚಿನಂತೆ ಕಿರಿಯಮಗ ಮಾದೇವನದೂ ಊರಲ್ಲಿ ಹಾವಳಿ ಹರಡುತ್ತಿತ್ತು. ಈ ಅಪ್ಪ, ಮಗನನ್ನು ಎದುರು ಹಾಕಿಕೊಳ್ಳುವ ಎದೆಗಾರಿಕೆ ಊರಲ್ಲಿ ಯಾರಿಗೂ ಇಲ್ಲ. ಆದರೆ ಇವರಿಬ್ಬರಿಗೆ ವ್ಯತಿರಿಕ್ತವಾಗಿದ್ದ ಹಿರಿಯವ ಮರಿಯ, ಯಾವ ತಂಟೆ ತಗಾದೆಯೂ ಇಲ್ಲದೆ ತನ್ನ ಪಾಡಿಗಿರುವ ಇಪ್ಪತ್ತೈದರ ಕಟ್ಟುಮಸ್ತಾದ, ಪೊದೆ ಮೀಸೆಯ ಚೆಲುವ. ಕಣ್ನೋಟದಲ್ಲೆ ಹೆಣ್ಣುಗಳ ಬಯಕೆಗೆ ಕಿಚ್ಚಿಟ್ಟು, ಪೊದೆಮೀಸೆಯ ಮರೆಯ ಆ ನಗುವಲ್ಲೇ ಅವರನ್ನು ಕೊಲ್ಲುತ್ತ; ಸದಾ ಆ ಹರೆಯದ ಹೆಣ್ಣುಗಳ ಕನಸಲ್ಲಿಯೇ ವಿಹರಿಸುವವ. ಹೋದವರ್ಷ ಮದ್ವೆಯಾಗಿ, ಮೊನ್ನೆ ಹೆರಿಗೆಯಲ್ಲಿ ಅವಳು, ಕೂಸು ತೀರಿಕೊಂಡ ಮೇಲೆ ಸೊರಗಿ, ಮೆತ್ತಗಾಗಿದ್ದ. ಮಾದೇವನ ಹೆಂಡತಿ ಮನೆತುಂಬಿದ ಮೇಲೆ ಹೆಚ್ಚುಕಮ್ಮಿ ಇವನ ವಾಸ ತೋಟದಲ್ಲಿಯೇ ಆಗಿ, ಊರವರ ಕಣ್ಣಿಗೆ ಬೀಳುವುದೇ ಅಪರೂಪ. ಇನ್ನು ಮೇಲ್ನೋಟಕ್ಕೆ ಶನಿದೇವಯ್ಯನ ಹಿಂಬಾಲಕನಂತಿದ್ದೂ ಅವನಿಗೆ ಕಡು ವಿರೋಧಿ ಪರಶಿವಗೌಡ, ಶನಿದೇವಯ್ಯನ ಎಲ್ಲಾ ಹೊಲಸುತನವನ್ನು ತುಂಬಿಕೊಂಡಿದ್ದರೂ ಸಹ, ಅವನನ್ನು ಚೇರ್ಮನ್‌ಗಿರಿಯಿಂದ ಕೆಳಗಿಳಿಸಲು ಜನರ ಮನವೊಲಿಸಲು ಸೋಗಲಾಡಿಯಂತೆ ಓಡಾಡುವ ಖದೀಮ. ಇವರುಗಳ ಹಿಂದೆ ದೊಡ್ಡ ಗುಂಪುಗಳು ಇವರು ಮಾಡುವ ಹಲ್ಕಾತನಕ್ಕೆ ಜಯ್ ಎನ್ನಲು ಸದಾ ಸಿದ್ಧವಿರುವುವು. ಇಡೀ ಹಳ್ಳಿಯ ಪ್ರೀತಿ, ವಿಶ್ವಾಸಕ್ಕೆ, ಗೌರವಕ್ಕೆ ಪಾತ್ರನಾಗಿರುವ ರಾಘವಯ್ಯ ಈ ಊರಿನ ಪಾಠಶಾಲೆಯ ಮೇಷ್ಟ್ರು. ಯಾರನ್ನೂ ಎದುರುಹಾಕಿಕೊಳ್ಳದ, ನೀತಿ ನಿಯಮಗಳಿಲ್ಲದ ಸಮಯಾನುವರ್ತನೆಯ ಚಾಣಾಕ್ಷ. ಅಂತೆಯೇ ಗೌರವಾನ್ವಿತ ವ್ಯಕ್ತಿ. ಇನ್ನು ಹಟ್ಟಿಯ ಜನರೋ ಶುದ್ಧ ಮೂಢರು. ಸ್ವಂತ ಬುದ್ಧಿಯಿರದೆ, ತಮ್ಮ ತಮ್ಮಲ್ಲಿಯೇ ಕಚ್ಚಾಡುತ್ತ ಸದಾ ಬೇರೆಯವರ ತೆವಲುಗಳಿಗೆ ಬಲಿಯಾಗಲು ಸಿದ್ಧವಿರುವವರು. ಒಗ್ಗಟ್ಟಿನ ಅರ್ಥವೇ ಅರಿಯದ, ತಮ್ಮವರು ಉದ್ಧಾರವಾದರೇ ಸಹಿಸದ ಕುದುಗು ಬುದ್ಧಿಯ ಜನ. ಇಂತಹವರ ನಡುವೆ ಸಿಕ್ಕಿಕೊಂಡಿದ್ದಳು ದೇವೀರಿ.

ಕಣ್ಮುಚ್ಚಿ ತೆರೆಯುವುದರೊಳಗೆ ದೇವೀರಿಯ ಚೆಲುವು ಆ ಹಳ್ಳಿಗೇ ಮಿಂಚಾಗಿ, ನೋಡು ನೋಡುತ್ತಿರುವಂತೆಯೇ ಇಡೀ ಊರಿಗೆ ಕಿಚ್ಚಿಟ್ಟಿತು. ಸ್ವಲ್ಪ ಒತ್ತಿದರೂ ರಕ್ತ ಚಿಮ್ಮುವುದೋ ಎಂಬಂತಹ ಮೈಬಣ್ಣ. ದುಂಡು ಮುಖದಲ್ಲಿ ನೋಡುವ ವರ ಚಿತ್ತಚಂಚಲಗೊಳಿಸುವ ಅರಳುಗಣ್ಣುಗಳು, ಬಿಗಿದು ಕಟ್ಟಿದ ಕುಪ್ಪಸದಲ್ಲೂ ಹೊರಗೆ ಇಣುಕುವ ತುಂಬಿದೆದೆ. ಸಣ್ಣನೆಯ ನಡುವಿಗೆ ಮೀನಖಂಡ ಕಾಣುವಂತೆ ಸೀರೆ ಸುತ್ತಿ, ಕಾಲಿನ ಗೆಜ್ಜೆಯನ್ನು ಘಲ್ ಎನಿಸುತ್ತ ಹೊರಟರೆ ಗಂಡಸರೆದೆ ಝಲ್...! ಎಂದು ನೋಡುತ್ತಲೇ ಕಚ್ಚೆಗಳು ಸಡಿಲಗೊಳ್ಳುತ್ತಿದ್ದವು. ಊರಿಗೆ ಊರೇ ಆಕೆಗಾಗಿ ಪರಿತಪಿಸಿ, ನಿದ್ದೆಗೆಟ್ಟಿತು. ಸೂಕ್ಷ್ಮ ತಿಳಿದ ಮಾವ ದ್ಯಾಮಯ್ಯ ಗಂಡುಗಳ ಬೇಟೆಗೆ ತೊಡಗಿದರೆ, ಹಣವನ್ನು ಚೆಲ್ಲಿ, ತಿನ್ನಿಸಿ ಕುಡಿಸಿ, ಹೆದರಿಸಿ ಬೆದರಿಸಿ ಯಾರೂ ಆಕೆಯನ್ನು ಮೂಸದಂತೆ ಮಾಡುವಲ್ಲಿ ಸಫಲವಾಯ್ತು ಮಾದೇವ, ಅವನ ಗುಂಪು. ಆದರೂ ಹಟ್ಟಿಯ ಪಡ್ಡೆ ಹುಡುಗರ ಅಂತರಂಗದಲ್ಲಿ ಅವಳನ್ನು ಅನುಭವಿಸುವ ಆಸೆ ಅಡಗದೆ, ಮಾದೇವನೋ, ಮತ್ಯಾರೋ ಆದಮೇಲೆ ನಮಗಾದರೂ ಸರಿ ಎಂಬ ಧೋರಣೆ ಬೆಳೆದು, ಅವರತ್ತ ಅವಳ ಮನವೊಲಿಸಲು ತಾವೇ ಮುಂದಾದರು. ಆದರೆ ದೇವೀರಿಯ ಮನಸ್ಸು ಮಾತ್ರ ಸದಾ ಆ ಹಳ್ಳಿಯ ಶಾಲೆಗೆ ಹೋಗಿಬರುವ ಮಕ್ಕಳಲ್ಲಿಯೇ ಹುದುಗಿ, ಅವಳ ಆಸೆಗಣ್ಣು ಪಾಠಶಾಲೆಯತ್ತಲೇ ತೆರೆದು, ಹಟ್ಟಿಯ ಮಕ್ಕಳಿಗೆ ತನಗೆ ತಿಳಿದಷ್ಟು ಓದುಬರಹದ ಅರಿವು ಮಾಡಿಕೊಡುವುದರಲ್ಲಿ ಸಂತೃಪ್ತಿ ಪಡೆಯುತ್ತಿತ್ತು. ತನ್ನನ್ನು ಸುತ್ತುವರಿದು ನಿಂತಿದ್ದ ಸಮಸ್ಯೆಯ ಗಂಭೀರತೆಯ ಅರಿವು ಅವಳಿಗೆ ಇಲ್ಲವೆಂದಲ್ಲ, ಆದರೆ ಆಕೆಯದನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಸದಾ ತಲೆಮೇಲೆ ಕೈಹೊತ್ತು ಕೂರುವ ಅವ್ವನನ್ನು "ಯಾಕವ್ವ ಸುಮ್ಕೆ ಯೋಚ್ನೆ ಮಾಡಿ, ಮಾಡಿ ದೇಹ ಸವೆಸ್ಕೆಂತಿ? ನನ್ನ ಹಣೆಬರಹದಾಗಿ ಏನೈತೋ ಹಂಗಾಗ್ತೈತೆ ಬಿಡು..." ಎಂದು ತಾನೇ ಸಂತೈಸುತ್ತಿದ್ದಳು. ಎಂದೂ ತನ್ನ ಭವಿಷ್ಯಕ್ಕಾಗಿ ಅಳಲಿಲ್ಲ; ಕೊರಗಲಿಲ್ಲ. ಆದ್ರೆ ಅವಳ ಮಾತಿನಂತೆ ನಿರ್ಲಿಪ್ತವಾಗಿರಲು ಶಾಂತವ್ವನಿಗೆ, ದ್ಯಾಮಯ್ಯನಿಗೆ ಸಾಧ್ಯವಾಗದಾಯ್ತು. ಶನಿದೇವಯ್ಯ ದೇವೀರಿಯನ್ನು ಪರ್ಮನೆಂಟಾಗಿ ಇಟ್ಟುಕೊಳ್ಳಲು ಸಿದ್ಧನಾದ. ಆದಕ್ಕಾಗಿ ಏನೂ ಮಾಡಲೂ ತಯಾರಾದ. ಆದರೆ ಆದದ್ದೇ ಬೇರೆ.

ಅಂದು ಸೂರ್ಯ ಮುಳುಗುವ ಸಮಯದಲ್ಲಿ ಕೆರೆಯಲ್ಲಿ ಮಿಂದು, ಕೆರೆಯ ಏರಿಯ ಮೇಲೆ ಮನೆಯತ್ತ ಹೊರಟಿದ್ದ ದೇವೀರಿಗೆ ತೋಟದ ಕಡೆಯಿಂದ ಬರುತ್ತಿದ್ದ ಮರಿಯ ಎದುರಾದ. ಅರೆಕ್ಷಣ ನೋಟಗಳು ಸಂಧಿಸಿದವು. ಮುಂದಕ್ಕೆ ನಡೆಯುತ್ತ "ನಮ್ಮೂರಿನ ನಿದ್ದೆಗೆಡಿಸಿದವಳು ಇವಳೇ ಇರಬೇಕು" ಎಂದು ಮನಸ್ಸಲ್ಲಿಯೇ ಅಂದುಕೊಂಡು ಹಿಂದಕ್ಕೆ ತಿರುಗಿದ ಮರಿಯ. ಆಗಲೇ "ಯಾರಿವನೂ....?" ಎಂದುಕೊಂಡು ಹಿಂದಕ್ಕೆ ತಿರುಗಿದಳು ದೇವೀರಿ. ತಟ್ಟನೆ ಕತ್ತು ತಿರುಗಿಸಿ ಹೊರಟ ಮರಿಯ. ಆದರೆ ದೇವೀರಿ ಯಾಕೋ ಮತ್ತೆ ಮತ್ತೆ

ನೋಡಿದಳು. ಅಂದಿನಿಂದ ಸೂರ್ಯ ಮುಳುಗುವ ಹೊತ್ತಿಗೆ ದೇವೀರಿಯ ಕಾಲ್ಗಳು ಕೆರೆಯತ್ತ ಹೊರಟರೆ, ಊರೊಳಗೆ ಅಪರೂಪವಾದ ಮರಿಯ ಆಗಾಗ ಕಣ್ಣಿಗೆ ಬೀಳತೊಡಗಿದ. ಅದುವರೆಗೂ ಸಮಚಿತ್ತದಿಂದ, ಶಾಂತವಾಗಿದ್ದ ಮನ ಸ್ಸುಗಳು ಏರಿಳಿತಗೊಂಡವು. ಲಕ್ಮಿ ಮರಿಯನ ವಿಷಯವೆಲ್ಲ ಚಾಚೂ ತಪ್ಪದೆ ದೇವೀರಿಯೆದುರು ಹೇಳಿ "ಇತ್ತಿತ್ಲಾಗೆ ಮಂಕಾಗವ್ನೆ ಕಣೆ, ಮೊದ್ಲಂಗಿಲ್ಲ..." ಅಂದ್ಲು. "ಒಮ್ಮೆ ನನ್ನ ಕಣ್ಣಿನಾಗೆ ನೋಟ ನೆಡ್ಲಿ ಸಾಕು, ಆ ಕಿಚ್ಚೆಬ್ಬಿಸೋ ನೋಟಕ್ಕೆ, ಕೊಲೆಪಾತಕ ನಗೂಗೆ ಜೀವಬರಿಸಿ ನಾನದಕ್ಕೇ ಬಲಿಯಾಗದಂಗೆ ಇರಲಾರೆ... ಒಂದೇ ಒಂದು ನೋಟ ಸಾಕು..." ಎಂದು ತನ್ನ ಮನದಳಲು ಲಕ್ಮಿಯೆದುರು ದೇವೀರಿ ಬಿಚ್ಚಿದಾಗ ಮಧ್ಯಸ್ಥಿಕೆ ವಹಿಸಲು ಆಕೆ ಹೊರಟಳು. ಅವಳ ಆಸೆ, ಅಳಲನ್ನು ಮನಕರಗುವಂತೆ ಮರಿಯನ ಮುಂದೆ ಹೇಳಿದಾಗ ಅವನು ನಕ್ಕು, ತಲೆಕೊಡಹಿ ಹೋಗಿಬಿಟ್ಟ. ದೇವೀರಿ ಕಂಗಳು ತುಂಬಿ ಹರಿದವು. ಅವಳ ಹಗಲುರಾತ್ರಿ, ಕನಸುಮನಸ್ಸಿನಲ್ಲೂ ಮರಿಯನೇ ತುಂಬಿ, ಇನ್ನು ತಡೆಯದಾದ ಹೆಣ್ಣು ಸಮಯ ನೋಡಿ ಅವನನ್ನು ತೋಟಕ್ಕೇ ಹಿಂಬಾಲಿಸಿ ಹೊರಟಳು. ಅಂಗಿ ಕಳಚಿ, ಪಂಚೆ ಎತ್ತಿಕಟ್ಟಿ ಇನ್ನೇನು ಕೆಲಸದಲ್ಲಿ ತೊಡಗಬೇಕು "ಮರಿಯಾ..." ಎಂಬ ಸ್ವರ ಕೇಳಿಸಿ ಬೆಚ್ಚಿ ತಿರುಗಿದ ಮರಿಯ ಮರದ ಮರೆಯಿಂದ ಹೊರಬಂದು ತಲೆತಗ್ಗಿಸಿ ನಿಂತಳು ದೇವೀರಿ. "ನೀ.. ನೀನೂ...." ಎಂದು ತೊದಲುತ್ತಲೇ ಅವಳತ್ತ ಅಡಿಯಿರಿಸಿದ. ಅವನು ಸಮೀಪ ಬರುತ್ತಲೇ ಮೆಲ್ಲನೆ ತಲೆಯೆತ್ತಿ ಅವನ ಅಚ್ಚರಿಯ ನೋಟಕ್ಕೆ ತನ್ನ ನೋಟ ನೆಟ್ಟು 'ಮರಿಯಾ...' ಎಂದು ಮೆಲ್ಲನುಸುರಿದಳು. ತುಟಿಗಳು ಮೆಲ್ಲನೆ ಕಂಪಿಸುತ್ತಿದ್ದವು. ಮರಿಯ ಸೋತ. ಆ ನೋಟದಲ್ಲಿ ಹರಿದುಬಂದ ಪ್ರೀತಿಯ ಕಾವಿಗೆ ಮೈ ಬೆಚ್ಚಗಾಗಿ, ಏನೋ ಹೇಳಲು ತವಕಿಸುತ್ತಿದ್ದ ತುಟಿಗಳ ಕಂಪನಕ್ಕೆ ದೇಹ ಕಾವೇರಿ, ಬಯಕೆಯ ಬಾರಕ್ಕೆ ಬಳಲಿದಂತೆ ನಿಂತಿದ್ದ ಹೆಣ್ಣಿನತ್ತ ಅವನಿಗರಿವಿಲ್ಲದೆ ಕೈಚಾಚಿದಾಗ ಉಡ ದಂತೆ ಅವನನ್ನು ಕಚ್ಚಿಕೊಂಡಳಾಕೆ. ಹುಲ್ಲು ಬಣವೆಯ ಮೆತ್ತೆಯಲ್ಲಿ ಅವಳನ್ನು ಪೂರ್ಣವಾಗಿ ಆವರಿಸಿದ ಮರಿಯ ಯಾವುದೋ ವರ್ಣಿಸಲಾಗದ ಪ್ರೇಮದ ಸೆಳವಿಗೆ ಸಿಕ್ಕು, ಸುಖದ ಸವಿಯೊಳಗೆ ಮುಳುಗಿಹೋದ. ಎಂದೂ ಕಲ್ಪಿಸಿಕೊ ಳ್ಳಲು ಆಗದಂತಹ ಅನುರಾಗದ ಅನುಭವದಲ್ಲಿ ಮಿಂದು, ಹೊಸಜೀವ ಪಡೆದ. ಸವಿದಷ್ಟೂ ಸವಿಯುವ ಬಯಕೆ, ಅನುಭವಿಸಿದಷ್ಟೂ ಅನುಭವಿಸುವ ಹುಮ್ಮಸ್ಸು, ತೀರದ ದಾಹ ಅವರದು. ಆದರೆ ಈ ಒಡನಾಟ ದೇವೀರಿಗಾಗಿ ಪರಿತಪಿಸುತ್ತಿದ್ದವರ ಒಡಲಿಗೆ ಬೆಂಕಿ ಸುರಿಯಿತು. ಮಾದೇವ ಹುಚ್ಚನಂತೆ ತಲೆಕೂದಲು ಕಿತ್ತುಕೊಂಡರೆ, ಪರಶಿವಯ್ಯ ತನ್ನ ಶತ್ರುವಿನ ಮೊದಲ 'ಸೋಲಿಗೆ ಹಾಲುಕುಡಿದು ಕುಣಿದಾಡಿದ. ಸಂತಸದ ಭರದಲ್ಲಿ ಎಲ್ಲರೆದುರಿಗೆ ಶನಿದೇವಯ್ಯ ನನ್ನು ಹೀಯಾಳಿಸಿದ. ಆದರೆ ಶನಿದೇವಯ್ಯ ಎಲ್ಲರ ಎಣಿಕೆಗೆ ವಿರುದ್ಧವಾಗಿ, ಶಾಂತನಾಗಿ ಕಂಡರೂ ಒಳಗೆ ಜ್ವಾಲಾಮುಖಿ; ಹೆಣ್ಣಿನ ವಿಷಯದಲ್ಲಿ ಮೊದಲ ಪರಾಭವ, ಅದೂ ಮಗನಿಂದಲೇ. ತಾನು ಆಸೆಪಟ್ಟದ್ದು ತನ್ನ ಕೈ ಬಿಡುವುದೆಂ

ದರೆ....? ರಾತ್ರಿಯಾಯಿತೆಂದರೆ ತನ್ನ ಮಂಚ, ಹಾಸಿಗೆ, ದಿಂಬು, ಹೊದಿಕೆ ಎಲ್ಲವೂ ದೇವೀರಿಯಾಗೇ ಕಾಣಿಸುತ್ತಿರಲಿಲ್ಲವೆ? ಕೈಕೈ ಹಿಸುಕಿಕೊಂಡ. ಏಕಾಂತದಲ್ಲಿ ಮೇಷ್ಟ್ರು ರಾಘವಯ್ಯನ ಮುಂದೆ ತನ್ನ ಪ್ರತಿಷ್ಠೆಗೆ ದೊಡ್ಡ ಪೆಟ್ಟು... ಹೋಗಿ, ಹೋಗಿ ಆ ಕೀಳುಜಾತಿಯ ಬಸವಿಯ ಸಂಗದಲ್ಲಿ ತಿಳಿಯದೆ ಮಗ ಏನಾದರೂ ಹೆಚ್ಚುಕಮ್ಮಿ ಮಾಡಿಕೊಂಡರೆ ಎಂಬ ಗಾಬರಿ, ಹೆದರಿಕೆ ಒಂದೆಡೆ. ರಾಘವಯ್ಯನನ್ನು ಮಗನಿಗೆ ಬುದ್ಧಿವಾದ ಹೇಳಲು ಕಳುಹಿಸಿದ. ಮೇಷ್ಟ್ರ ಮಾತುಗಳನ್ನು ಸಾವಧಾನದಿಂದ ಕೇಳಿಸಿಕೊಂಡ ಮರಿಯ ನಗುತ್ತಾ ನುಡಿದ "ಆ ವಿಷಯ ಇರ್ಲಿಬಿಡಿ ಮೇಷ್ಟ್ರೆ. ನೀವೆಷ್ಟೆ ಆಗ್ಲಿ ದೊಡ್ಡವರು, ಅಲ್ಲ ಹೆಚ್ಚಾಗಿ ಪಾಠ ಹೇಳಿಕೊಡುವ ಗುರುಗಳು. ನಿಮಗಿಂತ ತಪ್ಪು, ಸರಿ ಇನ್ಯಾರಿಗೆ ತಿಳಿದೀತು... ನನ್ನದು ತಪ್ಪೊ, ಸರಿನೋ ನಿಮ್ಗೂ ಗೊತ್ತು. ಆದ್ರೆ ನೀವು ಬಾಯ್ಬಿಟ್ಟು ಹೇಳ್ಲಾರಿರಿ... ನಿಮ್ಮ ಮೇಲೆ ನನಗೆ ಬಹಳ ವಿಶ್ವಾಸ, ಗೌರವ ಐತೆ ಮೇಷ್ಟ್ರೆ...., ನನ್ನದೊಂದು ಮಾತು ನಡೆಸಿಕೊಡ್ತಿರಾ....?" ಎಂದು ಪ್ರಶ್ನಿಸಿ ಅವರ ಉತ್ತರಕ್ಕೂ ಕಾಯದೆ ತಾನೇ ಹೇಳಿದ "ನನ್ನ ದೇವೀರಿಗೆ ಈಗ್ಲೂ ಓದೋ ಆಸೆ ತುಂಬ್ಕಂಡೈತೆ. ಏಳ್ನೆ ಕಲಾಸ್ವರ್ಗೂ ಕಲ್ತವ್ಳೆ. ಆದ್ರೆ ಮುಂದೆ ಇನ್ನೂ ಕಲೀಬೇಕನ್ನ ಇಚ್ಚೆ ಅದನ್ನ ಪೂರೈಸಕೆ ಸಾಧ್ಯವಾ ಮೇಷ್ಟ್ರೆ...? ನೀವು ಏನಾರ ಮಾಡಕೆ ಆಯ್ತದಾ...?" ಅರೆಕ್ಷಣ ಉಸಿರು ಸಿಕ್ಕಿಕೊಂಡಂತಾಯ್ತು ಮೇಷ್ಟ್ರಿಗೆ. ಮಾತನಾಡದೆ ಎದ್ದು ಹೊರಟರು. ಆದರೆ ಅದರ ಬಗ್ಗೆ ಶನಿದೇವಯ್ಯನೊಡನೆ ಸಮಾಲೋಚಿಸುತ್ತ ಅವರ ಚಾಣಾಕ್ಷತೆ ಗರಿಗೆದರಿ ಮಾದೇವ, ಶನಿದೇವಯ್ಯ ಇಬ್ಬರನ್ನೂ ಸಮಾಧಾನಗೊಳಿಸಿದ್ದು, ಇದ್ದಕ್ಕಿದ್ದಂತೆ ಊರೇ ಶಾಂತವಾಯ್ತು.

ದಿನವೂ ಪಾಠ ಕಲಿಸಲು ತೋಟಕ್ಕೇ ಬರುವ ಮೇಷ್ಟರನ್ನು ದೇವರಿಗಿಂತ ಹೆಚ್ಚಿನ ಭಕ್ತಿಯಿಂದ ಕಂಡರು ಮರಿಯ, ದೇವೀರಿ. ಅವಳು ಮೇಷ್ಟರ ಕೃಪೆಯಿಂದ ಪ್ರೈವೇಟಾಗಿ ಪರೀಕ್ಷೆಗೆ ಕೂತಳು. ಪರೀಕ್ಷೆ ಮುಗಿದಾಕ್ಷಣ ಮರಿಯ ಅವಳನ್ನು ವರಿಸುವವನಿದ್ದ. ಇದೂ ಸಹ ಅವರ ಕೃಪೆಯೇ. ಪರೀಕ್ಷೆಯ ಸೆಂಟರ್ ಅಲ್ಲಿಂದ ನೂರು ಮೈಲಿ ದೂರದ ಟೌನಿನಲ್ಲಿ. ಆದ್ದರಿಂದ ದೇವೀರಿ ದಿನವೂ ಹೋಗಿಬರಬೇಕಿತ್ತು. ಮರಿಯನಿಗೋ ಈಗಲೇ ತೋಟದಲ್ಲಿ ವಿಪರೀತ ಕೆಲಸ. ಸರಿ, ಅವಳನ್ನು ಟೌನಿಗೆ ಕರೆದುಕೊಂಡು ಹೋಗಿಬರುವ ಜವಾಬ್ದಾರಿ ಮೇಷ್ಟರ ಪಾಲಿಗೆ. ಇದಕ್ಕಾಗಿಯೇ ಅವರು ಶ್ರಮಿಸಿದ್ದರು. ಆ ಕ್ಷಣ ಮದ್ವೆಯಾಗಬಯಸಿದ್ದ ಅವರನ್ನು ತಡೆದು, ಪರೀಕ್ಷೆ ಮುಗಿಯಲಿ ನಾನೇ ನಿಂತು ಮಾಡಿಸುತ್ತೇನೆ ಎಂದು ವಾಗ್ದಾನ ಮಾಡಿದ್ದರು.

ಒಂದೊಂದು ಪರೀಕ್ಷೆ ಮುಗಿಯುತ್ತಿದ್ದಂತೆ ದೇವೀರಿಯ ಆನಂದಕ್ಕೆ ಪಾರವೇ ಇರಲಿಲ್ಲ. ಆದರೆ ಕೊನೆಯ ದಿನದಂದು ರಾತ್ರಿ ಒಂಭತ್ತಾದರೂ ದೇವೀರಿ, ಮೇಷ್ಟ್ರು ಇಬ್ಬರೂ ಬಾರದಿದ್ದಾಗ ಮರಿಯ, ಶಾಂತವ್ವ, ದ್ಯಾಮಯ್ಯ ಗಾಬರಿಗೊಂಡರು. ಹತ್ತು ಗಂಟೆಯಾದರೂ ಅವರು ಬಾರದಿದ್ದಾಗ ಮರಿಯನಲ್ಲಿ ಚಡಪಡಿಕೆ

ಹೆಚ್ಚಾಯ್ತು. ಬಸ್‌ಸ್ಟಾಪಿನಲ್ಲೇ ಕೂತ. ಟೌನಿನಿಂದ ಬರುವ ಬಸ್ಸಿನ ಹಾದಿಗೆ ಕಣ್ಣು ನೆಟ್ಟು ಕೂತಿದ್ದ ಅವನಲ್ಲಿ ಗಾಬರಿ, ಭಯ, ತಳಮಳ; ಜೊತೆಗೆ ಪಕ್ಕಕ್ಕೆ ಕೂತು ಬಿಕ್ಕಳಿಸುತ್ತಿದ್ದ ಶಾಂತವ್ವ. ರಾತ್ರಿಯ ನೀರವತೆಯಲ್ಲಿ ಆ ಬಿಕ್ಕಳಿಕೆ ಅತಿ ಭಯಂಕರವಾಗಿ ಅವನೆದೆಯನ್ನು ನಡುಗಿಸುತ್ತಿತ್ತು. ಕೇಳಲಾರದೆ ಬಲವಂತದಿಂದ ಅಣ್ಣ ತಂಗಿಯನ್ನು ಎಬ್ಬಿಸಿ ಮನೆಗೆ ಕಳುಹಿಸಿದ. ಮೂಡಣ ಮೆಲ್ಲನೆ ಕೆಂಪಡರುತ್ತ ಸಾಗುತ್ತಿತ್ತು. ಆದರೂ ಚಲಿಸದೆ ಕುಳಿತೇ ಇದ್ದ ಮರಿಯ ಟೌನಿನ ಮೊದಲ ಬಸ್ಸು ಬರುವವರೆಗೆ. ಆ ಬಸ್ಸಿನಿಂದ ದೇವೀರಿ ಕೆಳಗಿಳಿದಾಗ ದೇಹದಲ್ಲಿ ಮಿಂಚು ಹರಿದು, ದಿಗ್ಗನೆದ್ದು ಒಂದೇ ಹಾರಿಗೆ ಅವಳನ್ನು ಸಮೀಪಿಸಿದ್ದ. ಮರುಕ್ಷಣ ಅವಳು ಅವನೆದೆಯಲ್ಲಿ ಅಡಗಿದ್ದಳು. ಆಕೆ ಒಂದೇ ಸಮನೆ ಅಳುತ್ತ, ಬಿಕ್ಕುತ್ತ ಬಡಬಡಿಸುತ್ತಿದ್ದಳು "ಮೇಷ್ಟ್ರು ನಿನ್ನೆ ಅದ್ಯಾಕೋ ಮೇಡಂ ಮನ್ಯಾಗೆ ನನ್ನೊಬ್ಬನ್ನೆ ಬಿಟ್ಟು, ಇಲ್ಲಿರು ಈಗ ಬರ್ತೀನಿ ಅಂತ್ಹೇಳಿ ಬರ್ಲೆ ಇಲ್ಲ.... ನಾನು ರಾತ್ರಿಯೆಲ್ಲ ಒಂದೆಸಮನ್ನಾಗಿ ಅಳಾದ್ನೋಡಿ ಆ ಮೇಡಮ್ಮು ಪಸ್ಟ್ ಬಸ್ಸಿಗೆ ಹತ್ತಿ ಕಳ್ಸಿದ್ರು..... ನಾನಿನ್ನ್ಯಾಕೆ ಎಲ್ಲೂ ಹೋಗಲ್ಲ. ನನ್ನೆಲ್ಲೂ ಕಳುಸ್ಬ್ಯಾಡ...." ಆದರೆ ಮರಿಯ ಏನನ್ನೂ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ದೇವೀರಿ... ತನ್ನ ದೇವೀರಿ.... ಇಲ್ಲೇ ತನ್ನೆದುರಿಗೇ... ತನ್ನತ್ತಿರವೇ.... ತನ್ನ ತೆಕ್ಕೆಯಲ್ಲೇ ಇರುವಳು. ಅವಳೆಲ್ಲೂ ಹೋಗಿಲ್ಲ. ಆಕೆ ಕಳೆದುಹೋಗಿಲ್ಲ ಎಂಬ ಸತ್ಯವನ್ನು ಅರಗಿಸಿಕೊಳ್ಳುವುದು ಸುಲಭದ ಮಾತಾಗಿರಲಿಲ್ಲ. ಆಕೆಯನ್ನು ಇನ್ನಷ್ಟು ಗಾಢವಾಗಿ ತಬ್ಬಿಕೊಂಡ. ಬಿಟ್ಟರೆಲ್ಲಿ ಮತ್ತೆ ಕಳೆಯುವಳೋ ಎಂಬಂತೆ ತನ್ನ ಬಾಹುಗಳಲ್ಲಿ ಅವಳನ್ನು ಅಡಗಿಸಿಕೊಂಡ. ಕಣ್ಣಲ್ಲಿ ಕಣ್ಣು ಬೆರಸಿ ಪಿಸುನುಡಿದ "ಇನ್ನೊಂದ್ಸಾರಿ.... ಇನ್ನೊಂದ್ಸಾರಿ ನೀನಿಂಗೆ ನನ್ನಿಂದ ದೂರ ಹೋದ್ರೆ ನಾನು ಬದುಕಲ್ಲ ದೇವಿ... ನಾನು ಬದುಕಿರಲ್ಲ..." ಮತ್ತೆ ಅವಳಿಗೆ ಮಾತಾಡಲು ಅವಕಾಶ ಕೊಡಲಿಲ್ಲ. ಅಷ್ಟು ಕಾಲದ ಅಗಲಿಕೆಯ ನೋವು, ವಿರಹದ ತಾಪವೆಲ್ಲ, ಆ ಕ್ಷಣವೇ ಶಮನಗೊಳಿಸುವಂತೆ ಪರಸ್ಪರ ಬೆರೆತರು; ಎಲ್ಲರನ್ನು, ಎಲ್ಲವನ್ನು ಮರೆತರು. ನಿಜವಾಗಿಯೂ ನಡೆದದ್ದೇನು ? ಏನಾಯಿತು ? ಎಂದು ಮಾತನಾಡಿಕೊಳ್ಳಲು ವ್ಯವಧಾನವೆ ಇರಲಿಲ್ಲ ಅವರಿಗೆ. ಅವರು ಹೀಗೆ ಮೈಮರೆತಿದ್ದಾಗಲೇ ಶನಿದೇವಯ್ಯ, ಮಾದೇವ, ಮೇಷ್ಟ್ರು ಅವರ ಗುಂಪಿನೊಂದಿಗೆ ತೋಟಕ್ಕೆ ದಾಳಿಯಿಟ್ಟರು. "ಕರೀರೋ ಆ ಲೌಡಿನ ರಾತ್ರಿಯೆಲ್ಲಾ ಯಾವನ ಜತೇಲೋ ಇದ್ದು ಬಂದು, ಈಗ ನನ್ನ ಮಗನ್ನ ಹೊಲುಸೆಬ್ಬಿಸಾಕೆ ಬಂದಾಳೆ...." ಶನಿದೇವಯ್ಯ ಅಬ್ಬರಿಸಿದಾಗ ಮರಿಯ "ಅಪ್ಪಾ...." ಎಂದು ಚೀರಿದ. ದೇವೀರಿ ಓಡಿದವಳೇ ಮೇಷ್ಟರ ಕಾಲಿಗೆ ಬಿದ್ದಳು. "ನೀವೇ ಹೇಳ್ರಿ ಮೇಷ್ಟ್ರೆ ನಾನೆಲ್ಲಿದ್ದೆ ಅಂತ. ನೀವೇ ನಮ್ಮನ್ನ ಕಾಪಾಡ್ರಿ...." ಕಾಲು ಕೊಡವಿಕೊಂಡು ಹಿಂದಕ್ಕೆ ಸರಿದರು ಮೇಷ್ಟ್ರು "ಥೂ ಏನ್ ಹೆಂಗ್ಸಮ್ಮ ನೀನೂ.... ? ರಾತ್ರಿ ಆ ಮೇಷ್ಟ್ರು ಶ್ರೀನಿವಾಸನ ಜತೇಲಿದ್ದಾಗ, ನಾನು ಬಂದು ನಿನಗೆ ಛೀಮಾರಿ ಹಾಕಿದಾಗ ಎಲ್ಹೋಗಿತ್ತು ನಿನ್ನೀ ಬುದ್ಧಿ.... ?" "ಮೇಷ್ಟ್ರೇ... ? ಮೇಷ್ಟ್ರೆ ಏನೇಳ್ತಿರಿ... ? ಯಾವ ಶ್ರೀನಿವಾಸ ಮೇಷ್ಟ್ರೂ.... ? ನನ್ನ

ನೀವೇ ಕಾಪಾಡ್ಬೇಕು ಮೇಷ್ಟ್ರೆ..." ಯಾಚಿಸಿದಳು ದೇವೀರಿ. "ಥೂ ನಾಚಿಕೆಗೆಟ್ಟ ಹೆಂಗ್ಸೆ. ಮರಿಯನಿಗೆ ಮೋಸ ಮಾಡ್ತಿದ್ದೀಯಾ. ಇದೊಳ್ಳೆದಲ್ಲ ಅಂದಾಗ ಏನಂದೆ ನೀನು ? ಹೋಗಲೋ ನೀನ್ಯಾರು ನನ್ನ ಕೇಳಾಕೆ... ಅವ್ನ ಯಾವ ಘನಂದಾರಿ ಅಂತ ಅವ್ನಿಗೊಬ್ಳಿಗೆ ಜೋತಾಡ್ಲಿ....? ಮತ್ತೆ... ಮತ್ತೆ..." ತಡವರಿಸುತ್ತ ನಿಲ್ಲಿಸಿದ ಮೇಷ್ಟ್ರಿಗೆ ಮಾದೇವ ಧೈರ್ಯ ಕೊಟ್ಟ. "ನೀವು ಹೇಳ್ರಿ ಮೇಷ್ಟ್ರೆ ಹೆದರ್ಬೇಡಿ ಹೇಳ್ರಿ...." ತಡವರಿಸುತ್ತಲೇ ಮುಂದುವರಿಸಿದರು ಮೇಷ್ಟ್ರು "ಅದೇ ಅದೇ.... ನಮ್ಮಾವ ಶನಿದೇವನ್ನೆ ಬಿಟ್ಟೋಳಲ್ಲ ನಾನೂ...." ಅವ್ರ ಮಾತುಗಳು ಇನ್ನೂ ಮುಗಿದಿರಲಿಲ್ಲ ಮರಿಯ "ದೇವೀರಿ... ದೇವೀ...." ಎಂದು ಚೀರುತ್ತ, ಎದೆಯಿ ಡಿದುಕೊಂಡು ಕೆಳಕ್ಕೆ ಕುಸಿದಿದ್ದ. ಮೇಷ್ಟ್ರು ಅವರಿಗೆ ಪ್ರತ್ಯಕ್ಷ ದೈವ. ಅವರ ಒಂದೊಂದು ಮಾತೂ ಕಟುಸತ್ಯವಾಗಿ, ಬಾಣದಂತೆ ಚುಚ್ಚಿ, ಎದೆಯಾಳದಲ್ಲಿ ಉಕ್ಕಿದ ನೋವು ದೇಹವಿಡೀ ವ್ಯಾಪಿಸಿ, ಜರ್ಜರಿತಗೊಂಡಿದ್ದ ಮರಿಯ. ಇತ್ತ ಇವರ ಮಾತು ಕೇಳಿ ತಲೆಯೊಮ್ಮೆ ಗಿರ್ರನೆ ತಿರುಗಿ, ಎಲ್ಲವೂ ಶೂನ್ಯವಾಗಿ ಕಣ್ಣಗಲಿಸಿ, ಕಂಬದಂತೆ ನಿಂತಿದ್ದ ದೇವೀರಿ ಎಷ್ಟು ಆಘಾತಗೊಂಡಿದ್ದಳೆಂದರೆ ಮರಿಯ ತನ್ನನ್ನು ಕೂಗಿ, ಕುಸಿದಾಗಲು ಚಲಿಸಲು ಕೂಗಲು ಶಕ್ತಿಯಿಲ್ಲದೆ ನಿಶ್ಚೇಷ್ಟಳಾಗಿ ನಿಂತಿದ್ದಳು. ಸದ್ದುಗದ್ದಲವಿಲ್ಲದೆ ರಾಘವಯ್ಯ ತನ್ನ ಕೆಲಸ ಸಾಧಿ ಸಿದ್ದ.

ಅವರು ಕೊಟ್ಟ ಆಘಾತದ ಜೊತೆಗೆ ಮರಿಯನ ಸಾವು ದೇವೀರಿಯನ್ನು ಮಲಗಿಸಿಬಿಟ್ಟಿತು. ಸಾಂತ್ವನ ಹೇಳುವ ನೆಪದಲ್ಲಿ ಪರಶಿವಗೌಡ ದಿನವೂ ಬರತೊಡಗಿದ. ಹಟ್ಟಿಯ ಗೂಢಾಚಾರರಿಂದ ವಿಷಯ ತಿಳಿದ ಶನಿದೇವಯ್ಯ ಶಾಂತವ್ವನನ್ನು ಕರೆಸಿ "ಈ ಸಾರಿ ಏನಾದರೂ ಹೆಚ್ಚುಕಮ್ಮಿ ಆಯ್ತೊ ನೀವ್ಯಾರು ಜೀವಸಹಿತ ಉಳಿಯಲ್ಲ. ಇನ್ನೊಂದು ವಾರದಲ್ಲಿ ನಿನ್ಮಗ್ಳನ್ನ ಸಿದ್ಧಮಾಡಿ ಕಳಿಸ್ದಿದ್ರೆ ನೋಡು ಮುಂದೇನಾಗ್ತೈತೆ..." ಎಂದು ಬೆದರಿಸಿದ. ಇತ್ತ ಅಣ್ಣನ ಸಾವಿಗೆ ನೀವೇ ಕಾರಣ ಎಂಬ ಭಯವೊಡ್ಡಿ ಇಡೀ ಹಟ್ಟಿಯನ್ನು ತಲ್ಲಣಗೊಳಿಸಿದ ಮಾದೇವ ಜನ ಕೆಮ್ಮಲು, ಕ್ಯಾಕರಿಸಲೂ ಹೆದರಿದರು. ಮರಿಯನ ಸಾವಿನ ಪೆಟ್ಟು ಒಂದೆಡೆ, ಇನ್ನೊಂದೆಡೆ ತನ್ನ ದೇಹವನ್ನು ಹರಿದು ತಿನ್ನಲು ಹೊಂಚುತ್ತಿರುವ ನಾಯಿಗಳ ಕಾಟ. ಹಗಲುರಾತ್ರಿಯನ್ನದೆ, ಹೊತ್ತು ಗೊತ್ತಿಲ್ಲದೆ, ಊಟ ನಿದ್ದೆಯಿಲ್ಲದೆ ಯೋಚಿಸಿದಳು ದೇವೀರಿ. ತಲೆಯ ನರಗಳೆಲ್ಲಾ ಹರಿದು ಹೋಗುವವೊ ಎಂಬಂತೆ..... ಮೆದುಳು ಸಿಡಿದು ಹೊರಬರುವುದೋ ಎಂಬಂತೆ.

ಆದರೆ ಕಾಲಕ್ರಮೇಣ ಎಲ್ಲವೂ ಮಾಸುತ್ತ ಬಂತು. ಮರಿಯನ ಸಾವು, ಮೇಷ್ಟ್ರ ಮೋಸ ಎಲ್ಲವೂ ಮಾಸಿತು. ದೇವೀರಿ ಮೊದಲಿಗಿಂತಲೂ ಹೆಚ್ಚಿನ ಲವಲವಿಕೆ ಯಿಂದ, ಒನಪು ವಯ್ಯಾರದಿಂದ ಓಡಾಡುತ್ತಿದ್ದಳು. ಪರಿಶಿವಯ್ಯನನ್ನು ನೋಡು ವುದೇ ತಡ ಲಜ್ಜೆಯಿಂದ ಕೆಂಪಾಗಿ, ನಿಂತಲ್ಲೆ ನುಲಿಯುವಳು. ಶನಿದೇವಯ್ಯ ಎದುರು ಬಂದರೇ ಸಾಕು ಸೆರಗು ಸರಿಪಡಿಸಿಕೊಳ್ಳುತ್ತ ಒರೆನೋಟ ಬೀರಿ, ಕಾಲಿನ

ಬೆರಳಿಂದ ನೆಲಗೀರುತ್ತ ನಿಲ್ಲುತ್ತಿದ್ದಳು. ಮಾದೇವನತ್ತ ಕೊಂಕುನೋಟ ಎಸೆದು ಮಾದಕವಾಗಿ ನಗುತ್ತಿದ್ದಳು. ಇದೀಗ ಊರಿಗೇ ಹೊಸಕಳೆ. ಎಲ್ಲರಿಗೂ ದೇವೀರಿ ತಮಗೇ ಒಲಿದಿರುವಳೆಂಬ ಭ್ರಮೆ. ಆದರೂ ಶನಿದೇವಯ್ಯ ಮುಂಜಾಗ್ರತೆ ಎಂದು ರಾಘವಯ್ಯನನ್ನು ಮಾದೇವನ ಮೇಲೆ ಕಣ್ಣಿಡಲು, ಹಟ್ಟಿಯ ಕೆಲ ಹುಡುಗರಿಗೆ ಪರಶಿವಗೌಡನ ಮೇಲೆ ಕಣ್ಣಿಡಲು ಆದೇಶಿಸಿದ. ಪರಶಿವಗೌಡನ ಚೇಲಾಗಳು ಶನಿದೇವಯ್ಯನ ಮೇಲೆ ಕಣ್ಣಿಟ್ಟರೆ, ಮಾದೇವಿ ಪರಶಿವಗೌಡನ ಮೇಲೆ ಕಣ್ಣಿಟ್ಟ. ಈ ಗೂಢಚಾರಿಕೆ ಪರಸ್ಪರ ಗೊತ್ತಾಗದಂತೆ ನಡೆಯುತ್ತಿತ್ತು.

ಅಂದು ಅಮಾವಾಸ್ಯೆ ದಿನ ಪರಶಿವಗೌಡ ತೋಪಿನಲ್ಲಿ ದೇವೀರಿಗಾಗಿ ಕಾಯುತ್ತಿದ್ದ. ಆಗಲೇ ರಾತ್ರಿ ಹತ್ತಾಗಿತ್ತು. ಕೆರೆಯ ಪಕ್ಕದ ಮರಗಳ ಗುಂಪು ದಾಟಿ ಮುಂದಕ್ಕೆ ತೋಪು. ಕೆರೆಯವರೆಗೂ ಬಂದ ಮಾವನನ್ನು ಹಿಂದಕ್ಕೆ ಕಳುಹಿಸಿದಳು. ಮರಗಳ ಸಾಲಿನಗುಂಟ ನಡೆದವಳನ್ನು ಹಿಂದಿನಿಂದ ಹಠಾತ್ತನೆ ಮೇಲೆರಗಿ ಬಾಯ್ಮುಚ್ಚಿ ಎಳೆದೊಯ್ಯಿತು ಮುಸುಕಿನ ವ್ಯಕ್ತಿಯೊಂದು. ಉಸಿರಾಡಲು ಆಗದೆ ಒದ್ದಾಡುತ್ತಿದ್ದವಳ ಉಡಿಗೆ ಕೈಹಾಕಿತು. ಆಗಲೇ ಯಾರೋ ನಡೆದುಬರುವ ಸರಸರ ಸಪ್ಪಳದೊಂದಿಗೆ ಅವಳನ್ನು ಹಾಗೆ ಬಿಟ್ಟು ಕ್ಷಣಮಾತ್ರದಲ್ಲಿ ಮರೆಯಾಯಿತು ಆ ಮುಸುಕಿನ ಆಕೃತಿ. ತಡಬಡಿಸಿ ಎದ್ದು ಓಡಲು ತೊಡಗಿದ ದೇವೀರಿ ನೇರವಾಗಿ ಎದುರಿಗೆ ಬಂದ ಮಾದೇವನಿಗೆ ಡಿಕ್ಕಿ ಹೊಡೆದು ಚೀರಲು ಬಾಯ್ತೆರೆದವಳು ಅವನನ್ನು ಗುರುತಿಸಿ, ಹಾಗೆ ಅವನಿಗೆ ಆತುಕೊಂಡಳು. ನಡುಗುವ ಸ್ವರದಲ್ಲಿ ನಡೆದ ವಿಷಯ, ತಾನೆಲ್ಲಿಗೆ ಹೊರಟಿದ್ದಳೆಂಬ ವಿಷಯ ತಿಳಿಸಿದಾಗ ಅವಳನ್ನು ಮತ್ತಷ್ಟು ಹತ್ತಿರಕ್ಕೆಳೆದುಕೊಂಡು "ನೀನು ಲಕ್ಷ್ಮಿ ಮಧ್ಯಾಹ್ನ ಮಾತಾಡಿಕೊಂಡದ್ದು ನನಗೆ ಕೇಳಿಸಲಿಲ್ಲ ಅಂದ್ಕಂಡ್ಯಾ...? ಇನ್ಮುಂದೆ ಯಾವನು ನಿನ್ನ ತಂಟೆಗೆ ಬರದಂಗೆ ನೋಡಿಕೊಳ್ಳೊ ಜವಾಬ್ದಾರಿ ನಂದು. ನೀನು ಧೈರ್ಯವಾಗಿರು.... ಅವ್ನ್ಯಾರಂತ ಗೊತ್ತಾಗ್ಲಿಲ್ಲೇನು....?" 'ನಾನು ಸರ‍್ಯಾಗಿ ನೋಡ್ಲಿಲ್ಲ. ಆದ್ರೂ ಸ್ವರ ಮೇಷ್ಟ್ರುದು ಇದ್ದಂಗಿತ್ತು. ಅದೆಂಗಾನ ಹೋಗ್ಲಿ ಆದ್ರೆ, ನಾಳಿಕೆ ಗೌಡ್ರು ನನ್ನೇನ್ಮಾಡ್ತಾರೋ ಏನೋ.....' ಸ್ವರದಲ್ಲಿ ಭಯವಿತ್ತು. ಒಮ್ಮೆಗೆ ಅವಳನ್ನು ದೂರತಳ್ಳಿ ಸಿಡಿದು ನಿಂತ ಮಾದೇವ "ನಿನ್ನ ಮ್ಯಾಗೆ ಕೈ ಮಾಡೋ ಗಂಡ್ಸು ಅವ್ನು ಯಾವನು ಈ ಹಳ್ಯಾಗೆ ನಾನು ನೋಡೇಬಿಡ್ತೀನಿ ಒಬ್ಬೊಬ್ಬಿಗೂ ಪಾಠ ಕಲ್ಸೇ ನಿನ್ನತ್ರಕ್ಕೆ ಬರ್ತೀನಿ..." ಎಂದು ಸರಸರ ಹೊರಟ. ಮೌನವಾಗಿ ಅವನನ್ನು ಹಿಂಬಾಲಿಸಿದಳು ದೇವೀರಿ.

ಮರುದಿನ ಸಿಟ್ಟಿನಿಂದ ಕೆಂಡಾಮಂಡಲವಾಗಿದ್ದ ಪರಶಿವಯ್ಯನ ಮುಂದೆ ಅಳುತ್ತ, ಹೆದರಿದ ಹುಲ್ಲೆಯಾಗಿ ರಾತ್ರಿ ನಡೆದುದ್ದೆಲ್ಲ ಚಾಚೂತಪ್ಪದೆ ವಿವರಿಸಿದಳು. ಉರಿದುರಿದುಬಿದ್ದ ಗೌಡ "ಆ ಬೋಳಿಮಗನ್ಗೆ ಆಟೊಂದು ಕೊಬ್ಬಾ....? ನನ್ನೇನು ಅವ್ನು ನೋಡ್ಕೆಳಾದು ತಿರುಬೋಕಿ... ಅವ್ನೂ ಅವ್ನಪ್ಪನ್ನೂ ಹೆಂಗೆ

ನೋಡ್ಕಾಳದು ನನಗೂ ಚನ್ನಾಗೊತ್ತೈತೆ... ಈಗ್ನೀನು ಹೋಗು. ನಾನು ಮತ್ತೆ ಹೇಳಿಕಳುಸ್ತೀನಿ...." ಅಂದ.

ಗೌಡನ ಪ್ರತಿಯೊಂದು ಚಲನವಲನದ ಮೇಲೆ ನಿಗಾ ಇಟ್ಟ ಹಟ್ಟಿಯ ಹುಡುಗರಿಂದ ಅಂದು ಸಾಯಂಕಾಲವೇ ಶನಿದೇವಯ್ಯನಿಗೆ ಸುದ್ದಿ ಮುಟ್ಟಿ, ತಾನೆ ಹೊರಟ ದೇವೀರಿಯ ಬಳಿಗೆ, ಮನೆಮುಂದಿಯೆಲ್ಲಾ ಅವನಿಗೆ ಉದ್ದ ಅಡ್ಡಬಿದ್ದರು. ಎಲ್ಲರೂ ಎದ್ದರೂ ದೇವೀರಿ ಮಾತ್ರ ಅವನ ಕಾಲ್ಗಳನ್ನು ಬಿಡಲೇ ಇಲ್ಲ. ದುಃಖಿತಪ್ತಳಾದ ಅವಳಿಗೆ ಸೆರಗು ಪೂರ್ಣ ಜಾರಿದ್ದರ ಅರಿವೇ ಇರಲಿಲ್ಲ "ನನ್ನ ನೀವೇ ಕಾಪಾಡಿ ಧಣಿ... ನೀವಲ್ದೆ ನಮುಗ್ಯಾರು ದಿಕ್ಕೂ...?" ಎನ್ನುತ್ತ ಅದುವರೆಗಿನ ಎಲ್ಲಾ ವಿದ್ಯಮಾನಗಳನ್ನ ತಿಳಿಸಿ ಅವನ ಕಾಲ್ಗಳನ್ನು ಮತ್ತಷ್ಟು ಬಿಗಿಯಾಗಿ ಅದುಮಿದಳು. ಸ್ಮೃತಿ ತಪ್ಪಿದಂತಾಯ್ತು ಅರೆಕ್ಷಣ ಶನಿದೇವಯ್ಯನಿಗೆ. ಸಾವರಿಸಿಕೊಂಡು, ಅವಳಿಗೆ ಧೈರ್ಯನೀಡಿ ಯುದ್ಧಕ್ಕೆ ಹೊರಡುವ ಸಿಪಾಯಿ ಯಂತೆ ಹೊರಟ ಅವಳ ಮನೆಯಿಂದ ಯಾರನ್ನು ನಂಬಲಿ, ಬಿಡಲಿ ಎಂಬ ಸ್ಥಿತಿ ಅವನದು.

ಮುಂದಿನ ಒಂದು ವಾರದಲ್ಲಿ ತಂದೆಮಗನಿಗೆ ಜಗಳವಾಗಿ, ಮಾದೇವ ಮನೆಬಿಟ್ಟು ಹೊರಬಂದು ಹೆಂಡತಿಯನ್ನು ತವರಿಗಟ್ಟಿದ. ಅಪ್ಪ, ಮಗ ಇಬ್ಬರ ಕೋಪಕ್ಕೂ ಗುರಿಯಾಗಿ ರಾಘವಯ್ಯ ತತ್ತರಿಸಿ ಊರು ಬಿಡುವ ಹವಣಿಕೆಯ ಲ್ಲಿದ್ದು, ಗೌಡ ಮೇಲೆ ಬೀಳಲು ಸಮಯ ಹೊಂಚುತ್ತಿದ್ದುದನ್ನು ಅರಿತು ಮೆಲ್ಲನೆ ಅವನತ್ತ ವಾಲಿದ. ರಾಘವಯ್ಯನಂತಹ ಚಾಣಾಕ್ಷನನ್ನು ಬಿಟ್ಟುಕೊಡುವಷ್ಟು ಮೂಢನಲ್ಲ ಗೌಡ.

ಶಿವರಾತ್ರಿಯ ದಿನದಂದು ಎಲ್ಲರೂ ಕಾಯುತ್ತಿದ್ದ ಸಮಯ ತಾನಾಗಿ ಒದಗಿಬಂತು. ಜಾಗರಣೆಯ ಮರುದಿನ ಬೆಳಗ್ಗೆಯೇ ತೋಟದಲ್ಲಿ ಚಲ್ಲಾಪಿಲ್ಲಿ ಯಾಗಿ ಬಿದ್ದಿದ್ದ ಮಾವಿನ ಕಾಯಿಗಳನ್ನು, ಪರಶಿವಗೌಡನ ತೋಟದಲ್ಲಿ ಉರು ಳಿದ್ದ ಎಳನೀರುಗಳನ್ನು ನೋಡಿದ ಆಳು ಒಡನೆ ಗೌಡರಿಗೆ ಸುದ್ದಿ ಮುಟ್ಟಿಸಿದ. ಅಲ್ಲಿಯೇ ಗೌಡರ ಪಕ್ಕದಲ್ಲಿದ್ದ ರಾಘವಯ್ಯ ಬುದ್ಧಿ ಉಪಯೋಗಿಸಿದ "ಗೌಡ್ರೆ, ಇದೆಲ್ಲ ಆ ಹಟ್ಟಿ ಹುಡುಗರನ್ನ ಕಟ್ಕಂಡು ಮಾದೇವ ಮಾಡಿರೋ ಕೆಲ್ಸ ಅನ್ನದ್ರಲ್ಲಿ ಯಾವ ಅನುಮಾನವೂ ಇಲ್ಲ. ಪಾಪ! ಆ ಹುಡ್ಗಿ ದೇವೀರಿನ ಕಾಡಕಂತ ತೋಪಿನ ಸುತ್ತಮುತ್ತ ಓಡಾಡೋನು ಅವನಲ್ದೆ ಬ್ಯಾರೆ ಯಾರೂ ಇಲ್ಲ ಬಿಡ್ರಿ..." ಅಂದಿದ್ದೆ ತಡ ಸೂರೇನಳ್ಳಿ ಹತ್ತಿಕೊಂಡು ಉರಿಯತೊಡಗಿತು. ಅದರಲ್ಲಿ ನೊಂದವರು ಬೆಂದವರು ಎಷ್ಟು ಎಂದು ಲೆಕ್ಕವೇ ಸಿಗದಾಯ್ತು. ಶನಿದೇವಯ್ಯ, ಗೌಡರು ಆಸ್ಪತ್ರೆಯಲ್ಲಿ ಸಾವಿನೊಡನೆ ಸೆಣಸಾಡುತ್ತಿದ್ದರೆ ಮಾದೇವ ರಾಘವ ಯ್ಯನ ಕೊಲೆಯ ಆಪಾದನೆಯ ಮೇಲೆ ದಸ್ತಗಿರಿಯಾದ. ಹಲವಾರು ಕುಟುಂ

ಬಗಳು ಊರನ್ನು ತೊರೆದಿದ್ದವು. ಹಬ್ಬದ ಸಡಗರದಲ್ಲಿದ್ದ ಊರು ಎರಡೇ ದಿನದಲ್ಲಿ ಮಸಣವಾಗಿ ಬಿಕೋ ಎನ್ನುತ್ತಿತ್ತು.

ಜಾಗರಣೆಯ ದಿನ ಇಡೀ ಊರೇ ಶಿವಪೂಜೆಯಲ್ಲಿ ನಿರತವಾಗಿದ್ದ ಸಮಯ ದಲ್ಲಿ ತೋಪನ್ನು, ತೋಟವನ್ನು ಕಾಯುತ್ತಿದ್ದ ಆಳಿಗೆ ಕೆನ್ನೆಗೆ ಮುತ್ತಿಕ್ಕಿ ಮಲಗಿ ಸಿದ್ದು, ಅಮಾವಾಸ್ಯೆಯ ದಿನದಂದು ಕೆರೆಯ ಪಕ್ಕದ ಮರಗಳ ಸಾಲಿನಲ್ಲಿ ಹಿಂದಿನಿಂದ ಬಂದು ದೇವೀರಿಯನ್ನು ಆಕ್ರಮಣ ಮಾಡಿದ ಮುಸುಕಿನ ಆಕೃತಿಯು ದ್ಯಾಮಯ್ಯನ ಮಗಳು ಲಕ್ಷ್ಮಿಯೆಂಬ ರಹಸ್ಯವೂ ಅವರೊಡನೆ ಸೂರೇನಹಳ್ಳಿಯನ್ನು ತೊರೆದಿತ್ತು.

* * *

ಯುವ ಲೇಖಕಿ ಜಾಹ್ನವಿ ಕತೆಗಳಲ್ಲಿ ತಾನು ಕಂಡದ್ದನ್ನು ಮಾತ್ರ ಜೀವಂತ ಭಾಷೆಯಲ್ಲಿ ಹೇಳುವ ಕಾತರವಿದೆ. ಮಧ್ಯಮವರ್ಗದ ತೆಳುವಾದ ವಸ್ತುವನ್ನು ಆರಿಸಿಕೊಂಡಾಗಲೂ ದಲಿತರ ಅನುಭವವನ್ನು ನಿರೂಪಿಸುವಾಗಲೂ ಜಾಹ್ನವಿ ದಟ್ಟವಾಗಿ, ತೀವ್ರವಾಗಿ ಬರೆಯುತ್ತಾರೆ. ಬದುಕಿನ ವಿಚಿತ್ರಗಳನ್ನು ಕಂಡು ಎದುರಿಸುವ ದಿಟ್ಟತನದ ಜೊತೆಗೇ ಕಂಡದ್ದನ್ನು ಅದರೆಲ್ಲ ಸೊಗಡು ಮತ್ತು ಮುಗ್ಧತೆಯೊಂದಿಗೆ ಹೇಳುವ ಪ್ರತಿಭೆಯನ್ನು ಈ ಹೆಣ್ಣುಮಗಳಲ್ಲಿ ಕಾಣುತ್ತೇವೆ. ಸಾಹಿತಿಗೆ ಬೇಕಾದ ವಸ್ತುನಿಷ್ಠೆ ಮತ್ತು ಮಮತೆ ಇವರಲ್ಲಿ ಉದ್ದಕ್ಕೂ ಕಾಣುವ ವಿಶಿಷ್ಟ ಗುಣ.

–ಪಿ. ಲಂಕೇಶ್

ಬಿ.ಟಿ. ಜಾಹ್ನವಿ: ಖ್ಯಾತ ನೇತ್ರತಜ್ಞ ಡಾ. ಬಿ.ಎಂ. ತಿಪ್ಪೇಸ್ವಾಮಿಯವರ ಮಗಳಾಗಿ ಬೆಂಗಳೂರಲ್ಲಿ ಜನಿಸಿದ ಜಾಹ್ನವಿ ದಾವಣಗೆರೆಯ ಸೇಂಟ್ ಪಾಲ್ಸ್ ಶಾಲೆ, ಎ.ವಿ. ಕಮಲಮ್ಮ ಕಾಲೇಜಿನಲ್ಲಿ ಓದಿದರು. ಇವರು ಈಗ ಮಗ ಮತ್ತು ಪತಿಯೊಂದಿಗೆ ದಾವಣಗೆರೆಯಲ್ಲಿದ್ದಾರೆ; 'ವುಮನ್ಸ್ ಓನ್ ಹೆಲ್ತ್ ಕ್ಲಬ್ ಹಾಗೂ ಮಸಾಜ್ ಪಾರ್ಲರ್'ನ ಪಾಲುದಾರರಾಗಿದ್ದಾರೆ. ಇವರು ಶಾಮನೂರು ಗ್ರಾಮ ಪಂಚಾಯ್ತಿಯ ಸದಸ್ಯೆ.



ಬೆಲೆ ರೂ. 45



ಪತ್ರಿಕೆ ಪ್ರಕಾಶನ